ನವೋದಯ ಪ್ರಚಾರ ಪುಸ್ತಕಮಾಲೆ – ೧೮

# ಕನ್ನಡ ಕಟ್ಟಿದವರು

ಕು. ಶಿ. ಹರಿದಾಸ ಭಟ್ಟ



ಮಹಾತ್ಮಾ ಗಾಂಧಿ
ಮೆಮೋರಿಯಲ್ ಕಾಲೇಜು
ಉಡುಪಿ 2

ನವೋದಯ ಪ್ರಚಾರ ಪುಸ್ತಕಮಾಲೆ–೧೮

# ಕನ್ನಡ ಕಟ್ಟಿದವರು

ಕು. ಶಿ. ಹರಿದಾಸ ಭಟ್ಟ

ಮಹಾತ್ಮಾ ಗಾಂಧಿ ಮೆಮೋರಿಯಲ್ ಕಾಲೇಜು
ಉಡುಪಿ—೨.

ಸಂಪಾದಕ ಮಂಡಳಿ

ಕು. ಶಿ. ಹರಿದಾಸ ಭಟ್ಟ, ಎಂ.ಎ. (ಪ್ರಧಾನ ಸಂಪಾದಕ)
ಎಸ್. ಕೆ. ಶ್ರೀಪತಿ ಆಚಾರ್ಯ, ಎಂ.ಎ., ವಿದ್ವಾನ್
ಎಸ್. ತಿರುಮಲೇಶ್ವರ ಭಟ್ಟ, ಎಂ.ಎ.

ಮೊದಲನೆಯ ಮುದ್ರಣ, 1971

ಬೆಲೆ: ೫೦ ಪೈಸೆ

ಮುದ್ರಣ
ಮಣಿಪಾಲ ಪವರ್ ಪ್ರೆಸ್, ಮಣಿಪಾಲ.

# ನವೋದಯ ಪ್ರಚಾರ-ಇಂದು

ನಮ್ಮ ನವೋದಯ ಪ್ರಚಾರ ಪುಸ್ತಕಮಾಲೆ ಕಾಲೇಜಿನ ವಾರ್ಷಿಕ ಸಾಹಿತ್ಯೋತ್ಸವ ಸಂದರ್ಭದಲ್ಲಿ ಮಾಡಿದ ಭಾಷಣಗಳನ್ನು ಮಾತ್ರವೇ ಅಲ್ಲದೆ ಕನ್ನಡ ಸಾಹಿತಿ – ಕಲಾವಿದರ ಕುರಿತು ಲಿಖಿತ ಪ್ರಬಂಧಗಳನ್ನೂ ಪ್ರಕಟಿಸಲು ತೊಡಗಿ ಹದಿನೈದು ವರ್ಷಗಳಾದುವು. 'ಲಾಭ ಬೇಡ, ನಷ್ಟವಿಲ್ಲ' ಎಂಬ ಆರ್ಥಿಕ ತಳಹದಿಯಲ್ಲಿ ಕಾಲೇಜು ಕೈಗೊಂಡ ಈ ಪ್ರಕಟನ ಸಾಹಿತ್ಯಕ್ಕೆ ಕನ್ನಡಿಗರು ಸಾಕಷ್ಟು ಪ್ರೋತ್ಸಾಹ ನೀಡಿದ್ದಾರೆ.

ಪ್ರಕಟನೆಯ ಬಗ್ಗೆ ನಾವು ಯಾವ ನಿಯಮಿತತೆಯನ್ನೂ ಇಟ್ಟು ಕೊಂಡಿಲ್ಲವಾದರೂ ಇದುವರೆಗೆ ಸುಮಾರು ಹದಿನೇಳು ಪುಸ್ತಿಕೆಗಳು ಅಚಾಗಿವೆ. ಅದರಲ್ಲಿ ಎಷ್ಟೋ ತೀರಿವೆ. ಮುಂಬರುವ ಜಿಲ್ಲಾ ಸಾಹಿತ್ಯ ಸಮ್ಮೇಳನದ ನೆಪದಲ್ಲಿ ಮತ್ತೊಮ್ಮೆ ಈ ಜಿಲ್ಲೆ ಕನ್ನಡ ನಾಡಿನ ಸೇವೆಗೆ ಅಣಿಗೊಳಿಸಿದ ಮಹನೀಯರ ಪರಿಚಯವನ್ನು ಪ್ರಾಂಕ್ತವಾಗಿ ಪ್ರಕಟಿಸಬೇಕೆಂಬ ನಮ್ಮ ಆಶಯ ದೊಡ್ಡದೆ. ಹಲವು ಮಂದಿ ಲೇಖಕರು ಸಹಕರಿಸಿದ್ದಾರೆ. ಇದುವರೆಗೆ ಪ ಕಟಿತವಾದ (ಮರು ಪ್ರಕಟಿತವಾದ) ಗೋವಿಂದ ಪೈ, ಕಡೆಂಗೋಡ್ಲು, ಸೇಡಿಯಾಪು, ಕಾರಂತ ಅವರ ಜತೆಗೆ ಮುಳಿಯ ತಿಮ್ಮಪ್ಪಯ್ಯ, ಪಂಜೆ ಮಂಗೇಶರಾವ್, ಹುರುಳಿ ಭೀಮರಾವ್, ಉಗ್ರಾಣ ಮಂಗೇಶರಾವ್, ಎಸ್. ವೆಂಕಟರಾಜ, ಕಯ್ಯಾರ ಕಿಞ್ಞಣ್ಣ ರೈ, ಅವರನ್ನೂ ಪೋಣಿಸಿದ ಬಳಿಕ ಜಿಲ್ಲೆಯ ಸಾಹಿತ್ಯ ವ್ಯವಸಾಯದ ಒಂದು ಸಮಗ್ರ ಚಿತ್ರ ಮೂಡುವುದೆಂದು ನಾವು ಆಶಿಸಿದ್ದೇವೆ.

ಪ್ರಸ್ತುತ ಪ್ರಕಟನೆಯ ಲೇಖಕರು ಮಾಲೆಯ ಇತಿಮಿತಿ ಮತ್ತು ನಿಯಮಿತ ಅವಧಿಯೊಳಗೇನೆ ತಮ್ಮ ಕೃತಿಯನ್ನು ರಚಿಸಿ ಉಪಕರಿಸಿದ್ದಾರೆ. ಅವರಿಗೂ, ಸುಂದರವಾಗಿ ಮುದ್ರಿಸಿಕೊಟ್ಟ ಮಣಿಪಾಲ ಪವರ್ ಪ್ರೆಸ್ ಅವರಿಗೂ ನಮ್ಮ ಕೃತಜ್ಞತೆ.

ಕು. ಶಿ. ಹರಿದಾಸ ಭಟ್ಟ
ಪ್ರಧಾನ ಸಂಪಾದಕ

# ಮಾಸ್ತಿ

೪೩-೪೪ ಗವಿಪುರ ವಿಸ್ತರಣ – ಈ ಹೆಸರನ್ನು 'ಜೀವನ' ಮಾಸ ಪತ್ರಿಕೆಯ ವೇದಿಕೆಯಲ್ಲಿ ಎಷ್ಟೋ ಬಾರಿ ಕಂಡಿದ್ದೆ. ವಾಸ್ತವವಾಗಿ ಇಷ್ಟು ದಿನವೂ ಅಲ್ಲಿಗೆ ಕಾಲಿಟ್ಟಿರಲಿಲ್ಲ. ಪಾದರಕ್ಷೆಯನ್ನು ಮುಖ ಮಂಟಪದ ಹೊರಗಡೆ ಕಳಚಿ ಒಳಗಿರುವ ಶ್ರೀನಿವಾಸನ ದರ್ಶನ ಪಡೆದು ಹೊರಬರುವ ವೇಳೆಗೆ ರಕ್ಷೆ ಮಾಯ. "ನೋಡಿ, ಹೊರ ಗಿಟ್ಟರೆ ಯಾರಾದರೂ ಬಂದು ಹಾಕಿಕೊಂಡು ಹೋಗಿಬಿಡುತ್ತಾರೆ ಎಂದು ಒಳಗಿಡಿಸಿದ್ದೇನೆ. ಎಷ್ಟೋ ಸಲ ಹಾಗಾಯಿತು" ಎಂದ ಮಾಸ್ತಿ ಎಲ್ಲಿ ನನ್ನ ಸ್ನೇಹಿತರು ಒಮ್ಮೆ ಹೇಳಿದಂತೆ ತಾವೇ ಎತ್ತಿ ಟ್ಟರೊ ಎಂಬ ಶಂಕೆ, ಭೀತಿ. 'ಪಾಪಾತ್ಮಾ ಪಾಪಸಂಭವಃ' ಎಂದು ನನ್ನನ್ನೇ ನಾನು ಶಪಿಸಿಕೊಳ್ಳುವ ಹಾಗೆ ಆ ಸನ್ನಿವೇಶ ನಡೆದು ಹೋಯಿತು. ಮಾಸ್ತಿಯವರನ್ನು ಕಂಡಾಗ 'ಸಂದ ಜೀವನದ ರೀತಿ' ಯಂತೆ ತೋರುತ್ತದೆಂದು ಒಬ್ಬ ಕವಿ ನುಡಿದದ್ದು ಸಾರ್ಥಕ ವಾಯಿತು. ಅತಿಥಿಯ ಕ್ಷುದ್ರಾತಿಕ್ಷುದ್ರ ಆವಶ್ಯಕತೆಯನ್ನೂ ಗಮ ನಿಸುವ ಈ ಮಹಾಜೀವ, ಮಹಾ ಜೀವನಕ್ರಮ ಈ ರೀತಿ ಸಲ್ಲು ತ್ತಿರುವುದು ನಾಡಿನ ದೌರ್ಭಾಗ್ಯ.

ಕನ್ನಡದ ಆಸ್ತಿಯಾಗಿರುವ ಮಾಸ್ತಿ ವೆಂಕಟೇಶ ಅಯ್ಯಂಗಾರ ಅವರು ೧೯ನೇ ಶತಮಾನದಲ್ಲಿ ಜನ್ಮ ತಾಳಿದವರಾದರೂ ೨೦ನೆಯ ಶತಮಾನದಲ್ಲಿ ಬಹುಭಾಗ ಬಾಳಿ ಈ ಕಾಲಮಾನದ ಜನರ ಆಶೋ ತ್ತರಗಳನ್ನು ಬಲ್ಲವರಾಗಿ ಕನ್ನಡ ಸಾಹಿತ್ಯದಲ್ಲಿ ಸವ್ಯಸಾಚಿತನವನ್ನು ಮೆರೆದಿದ್ದಾರೆ. ಪರೀಕ್ಷೆ ಪಾಸುಮಾಡುವುದರಲ್ಲಿ ಅತ್ಯಂತ ಪ್ರತಿಭಾ

ವಂತರಾದ ಮಾಸ್ತಿಯವರು ಸಹಜವಾಗಿ ಅಂದಿನ ಮೈಸೂರು ಸೇವಾ ಪರೀಕ್ಷೆಯಲ್ಲಿ ಸರ್ವ ಪ್ರಥಮರಾಗಿ ಉತ್ತೀರ್ಣರಾಗಿ ಅಬಕಾರಿ ಇಲಾಖೆಯಲ್ಲಿ ಕೆಲಸ ಮಾಡಿ ನಿಷ್ಠಾವಂತರಾದರು. ಇಲಾಖೆಯ ಕೆಲಸ ಅವರಿಗೆ ನಾಡಿನ ಜೀವನದ ನಿಕಟ ಸಂಪರ್ಕ ಪಡೆಯುವಂತೆ ನೆರವಾಯಿತು. ಸಣ್ಣ ಕತೆಗಳ ಮೂಲ ಸಾಮಗ್ರಿ ಅವರ ಪರ್ಯಟನೆಯ ಪರ್ವದಲ್ಲಿ ಸಿದ್ಧವಾಯಿತು. ಅವರ ಮೊದ ಮೊದಲಿನ ಕೃತಿಗಳಾಗಿದ್ದ ಸುಬ್ಬಣ್ಣ, ಸಣ್ಣ ಕತೆಗಳ ನಾಲ್ಕು ಭಾಗ ಗಳು, ಕವಿತೆಗಳು ಈ ಗ್ರಂಥಗಳಲ್ಲಿ ಮಾಸ್ತಿಯವರ ಮೌಲಿಕ ಆಸಕ್ತಿ ಪ್ರಕಟವಾಯಿತು. ಬದುಕಿನ ಸೂಕ್ಷ್ಮಾತಿಸೂಕ್ಷ್ಮ ಭಾವ ರೇಖೆಗಳನ್ನೂ, ಅಂತಸ್ಸತ್ವವನ್ನೂ ಸೆರೆಹಿಡಿಯಬಲ್ಲ ಸರಳ ಸುಭಗ ಶೈಲಿ – ದ್ರಾಕ್ಷಾಪಾಕ – ಅಂದಿನ ಓದುಗರ ಮನಸ್ಸನ್ನು ಮುಗ್ಧ ಗೊಳಿಸಿತು. ವೆಂಕಟೇಶಾಚಾರ್, ಗಳಗನಾಥ ಮತ್ತು ಅಳಸಿಂಗಾರಾ ಚಾರ್ಯರ ಸಂಸ್ಕೃತಮಯ ಆಡಂಬರದ ಗದ್ಯದ ಸ್ಥಾನದಲ್ಲಿ ಹೊಸ ಗನ್ನಡದ, ತಿರುಳ್ಗನ್ನಡದ ಗದ್ಯ ಶೈಲಿಯನ್ನು ಪಟ್ಟಭದ್ರವಾಗಿ ಮಾಡಿದ ಶ್ರೇಯಸ್ಸು ಮಾಸ್ತಿಯವರ ಮೊದಲ ಬರಹಗಳಿಗೆ ಸಲ್ಲು ತ್ತದೆ. ವಿಮರ್ಶೆ (೧ರಿಂದ ೪) ಅಥವಾ ಆದಿಕವಿ ವಾಲ್ಮೀಕಿ, ಶ್ರೀ ರಾಮಕೃಷ್ಣ ಇವುಗಳಲ್ಲಿ ಪ್ರಚುರವಾದ ತೇಲುಗದ್ಯ ಕನ್ನಡ ವಿಮ ರ್ಶಕರಿಗೆ ಗುರುಸ್ಥಾನದಲ್ಲಿ ನಿಲ್ಲುವಂಥದಾಗಿದೆ. ಎಂಥ ಗಹನ ವಾದ ವಿಚಾರವನ್ನಾದರೂ ಸರಳಗನ್ನಡದಲ್ಲಿ ಸುಲಿದ ಬಾಳೆಯ ಹಣ್ಣಿನಂತೆ ತಿಳಿಸುವ ಸಾಧ್ಯತೆಯನ್ನು ಈ ವಿಷಯದಲ್ಲಿ ತೀವ್ರ ಸಂಶಯವಿದ್ದ ಆ ಕಾಲದಲ್ಲಿ ಮಾಸ್ತಿ ತೋರಿಸಿಕೊಟ್ಟರು. ಕಾವ್ಯ, ವಿಮರ್ಶೆ, ನಾಟಕ – ಇವಿಷ್ಟು ೧೯೪೦ರ ಹಿಂದಿನ ಕೃಷಿ. ೪೦ರ ಮುಂದಿನ ಎರಡು ದಶಕಗಳಲ್ಲಿ ಮಾಸ್ತಿಯವರು ತನ್ನ ಸಿದ್ಧ ಶೈಲಿಯನ್ನೂ ಅನುಭವವನ್ನೂ ಎರಕ ಹೊಯ್ದು 'ಚೆನ್ನಬಸವ ನಾಯಕ', 'ಚಿಕವೀರರಾಜೇಂದ್ರ'ಗಳಂಥ ಕಾದಂಬರಿ ರತ್ನಗಳನ್ನು

ಸೃಷ್ಟಿಮಾಡಿದರು. ಈ ತನ್ಮಧ್ಯೆ ಶೇಕ್ಸ್‌ಪಿಯರ್ ಕವಿಯ ನಾಟಕಗಳ ಸುಲಭಾನುವಾದದಲ್ಲಿ ಮಗ್ನರಾಗಿಯೂ, 'ಜೀವನ' ಪತ್ರಿಕೆಯ ಸಂಪಾದನ ನಿರತರಾಗಿಯೂ, ಪರಿಷತ್ತಿನ ಎರಡು ವರ್ಷಗಳ ಪರಿವ್ರಾಜಕ ಕಾರ್ಯವನ್ನು ಕೈಗೊಂಡೂ ಸುಮಕೋಮಲವಾದ ತಮ್ಮ ಕಾಯಕವನ್ನು ನಾಡಿನಾದ್ಯಂತ ಹರಡಿದರು. 'ಜೀವನ'ದಲ್ಲಿ ಅಮೆರಿಕದ ವಿದೇಶ ಧೋರಣೆಯನ್ನು ಇವರು ಖಂಡಿಸಿದಂತೆ ಆಂಗ್ಲ ಪತ್ರಿಕೆಗಳವರೂ ಮಾಡಿರಲಾರರು; ಅಂಥ ಕೆಚ್ಚು ಅವರದು. ಅಮೆರಿಕದ ಶ್ರೀಮಂತಿಕೆಯ ದರ್ಪಕ್ಕೆ ಸೊಪ್ಪುಹಾಕದ ಮಾಸ್ತಿ 'ಚೆನ್ನಬಸವನಾಯಕ'ದ ಕುರಿತು ಕನ್ನಾಡಿನ ಕರುಬಿಗಳು ಹೂಲಿ ಎಬ್ಬಿಸಿದಾಗ ಅನಾಸಕ್ತಿ ಯೋಗವನ್ನು ತಳೆದು ದೊಡ್ಡವರು ಹೀಗಿರಬೇಕು ಎಂದು ತೋರಿಸಿಕೊಟ್ಟರು. ಸಾಹಿತ್ಯದ, ಮತ್ಸರ ಜಾತೀಯ ವಿದ್ವೇಷದ ಅಗ್ನಿಕುಂಡದಲ್ಲಿ ಮಾಸ್ತಿಯವರ ನಿಷ್ಪಾಕ್ಷಿಕ ಕೃತಿಯನ್ನು ಸುಡುವ ಮೂರ್ಖತನವನ್ನು ಮುಟ್ಟಿ ಕನ್ನಡ ನಾಡನ್ನು ಮಧ್ಯಯುಗದ ಪರಾಗತಿಗೆ ತಳ್ಳಿತು. ಈ ಅಗ್ನಿಪರೀಕ್ಷೆಯಲ್ಲಿ ಕೃತಿಕಾರರೂ, ಕೃತಿಯೂ ಇನ್ನಷ್ಟು ನಿಚ್ಚಳವಾಗಿ ಲೋಕದ ಮುಂದೆ ಪ್ರಕಟವಾಗುವಂತಾಯಿತು. ಈ ಬಗ್ಗೆ, "ಇಷ್ಟರಲ್ಲಿ ನಮ್ಮ ರಾಷ್ಟ್ರದ ಸಾಹಿತ್ಯ ಎಕಾಡೆಮಿ ಈ ಕಾದಂಬರಿಯನ್ನು ರಾಷ್ಟ್ರದ ಇತರ ಭಾಷೆಗಳಿಗೆ ಭಾಷಾಂತರಿಸಲು ನಿಶ್ಚಯಿಸಿತು. ಉತ್ತರ ಕರ್ನಾಟಕದ ವೀರಶೈವ ಸೋದರರು ಕೆಲವರು ಇದು ಕೂಡದೆಂದು ಚಳವಳಿ ನಡೆಸಿದರು. ಆಗ ಮೈಸೂರಿನ ಅಧ್ಯಾಪಕ ಮಿತ್ರರು ನಾಲ್ವರು ಆ ನಿಲುವು ತಪ್ಪೆಂದು ಒಂದು ಪತ್ರ ಬರೆದು ಅದರ ಒಂದು ಪ್ರತಿಯನ್ನು ನನಗೆ ಕಳುಹಿಸಿದರು, ಪತ್ರದ ಕೊನೆಗೆ ಅವರ ಸಹಿ ಇದೆ. ನಾನು ಅದನ್ನು ಇಲ್ಲಿ ಕೊಡುವುದಿಲ್ಲ. ಕಾರಣ ಈ ಸೋದರರ ಮತ್ತು ಇತರ ಸೋದರ ವೀರಶೈವರ ಮಧ್ಯೆ ನಾನು ವೈಷಮ್ಯ ಮೂಡಿಸುವುದು ಬೇಡ ಎಂಬ ಅಪೇಕ್ಷೆ" ಎಂದು 'ಸಾಹಿತ್ಯಲಾಲನೆ'

ಯಲ್ಲಿ ಮಾಸ್ತಿ ಬರೆದು ಪರವ್ಯಕ್ತಿ ಸಹಿಷ್ಣುತೆಯನ್ನು ಇದಿರೊಡ್ಡಿ ವಿನಯದ ಮೂರ್ತಿಯಾದರು. ಚಕ್ರವರ್ತಿ ರಾಜಗೋಪಾಲಾಚಾರ್ಯರು 'ಚೆನ್ನಬಸವನಾಯಕ'ದ ಆಂಗ್ಲ ಅನುವಾದವನ್ನೋದಿ ಬರೆದ ಪತ್ರದಲ್ಲಿ ಆ ಕೃತಿಯನ್ನು ಯಾಕೆ, ಕೃತಿಕಾರನನ್ನೂ ಮಹತ್ತಿನ ಪೀಠಕ್ಕೇರಿಸಿದ್ದಾರೆ :

'I wish I could write a book like yours! But what is the good of wishing? Apart from ability one must be a good man to write a book of this kind. God bless you.'

ಅನುವಾದಿತವಾದ ಬಳಿಕವೂ ಉಚ್ಚ ಸಾಹಿತ್ಯಿಕ ಗಂಧವನ್ನು ಸೂಸುವ ವೈಶಿಷ್ಟ್ಯ ಮಾಸ್ತಿಯವರ ಹೆಚ್ಚಿನ ಕೃತಿಗಳಲ್ಲಿದೆ. ಅನುವಾದಗಳನ್ನೇ ಮೆಚ್ಚಿ ಇನ್ನಿಂಥವನ್ನು ಎಂದು ನಮಗೊದಗಿಸುತ್ತೀರಿ ಎಂದು ಕುತೂಹಲದಿಂದ ಕೇಳುವ ಕನ್ನಡೇತರ ರಸಿಕರು ಬರೆದ ಹಲವು ಓಲೆಗಳನ್ನು ಸಾಹಿತ್ಯ ಲಾಲನೆಯಲ್ಲಿ ಪೋಣಿಸಲಾಗಿದೆ. ಮಸುಮತ್ತಿ, ಸಾರಿಪುತ್ರನ ಕೊನೆಯ ದಿನಗಳು, ಸುಬ್ಬಣ್ಣ, ಆದಿಕವಿ ವಾಲ್ಮೀಕಿ, ಕಾಕನಕೋಟೆ, ಯಶೋಧರಾ, ಚೆನ್ನಬಸವನಾಯಕ, ಚಿಕವೀರರಾಜೇಂದ್ರ – ಮುಂತಾದ ಕೃತಿಗಳು ಕನ್ನಡದಲ್ಲಿ ಕಾಲ ತೇದಂತೆ ಹೆಚ್ಚು ಹೆಚ್ಚು ಸುಗಂಧ ಹೊರ ಸೂಸುವ ಗಂಧದ ಮರದಂತೆ ಶಾಶ್ವತ ಮೌಲ್ಯಗಳನ್ನೊಳಗೊಂಡಿವೆ.

ಮಾಸ್ತಿ ಸ್ವಯಂಪ್ರಕಾಶಕರಾಗಿ ನಲ್ವತ್ತು ವರ್ಷಗಳಾದುವು. ಅವರ ಮನೆ ಸಾವಿರಾರು ಪುಸ್ತಕಗಳ ಒಂದು ಗ್ರಂಥೋಗ್ರಾಣ. ಇಷ್ಟು ವರ್ಷಗಳಲ್ಲಿ ೨,೫೦,೦೦೦ ರೂಪಾಯಿನಷ್ಟು ಬಂಡವಾಳವನ್ನು ಹೂಡಿ ೨,೮೦,೦೦೦ ರೂ. ಎತ್ತಿ ನಿವ್ವಳ ೩೦,೦೦೦ ಲಾಭ (೪೦ ವರ್ಷಗಳಿಗೆ) ಪಡೆದಿದ್ದೇನೆಂದು ಅವರು ನಿರುದ್ವಿಗ್ನಚಿತ್ತರಾಗಿ ನುಡಿಯುತ್ತಾರೆ. ಮುಗುಳ್ನಗುತ್ತಾರೆ. ಇತ್ತೀಚೆಗೆ ೩ ಸಂಪುಟಗಳ

ಆತ್ಮಕಥೆ 'ಭಾವ'ವನ್ನೂ ಬರೆದು ತನ್ನ ಜೀವನ ವೃತ್ತಾಂತವನ್ನು ಕನ್ನಡಿಗರ ಮುಂದೆ ಇರಿಸಿದ್ದಾರೆ. ಈ ಹಿರಿಯರು ತಮ್ಮ ಕಲೆಯಿಂದ ಸ್ನೇಹದ ಬಲೆ ನೇಯ್ದು, ತಮ್ಮ ದೀರ್ಘ ಕಾಲೀನ ಸಂಪಾದಕೀಯ – ಪ್ರಕಾಶಕೀಯ ಕಾರ್ಯದಿಂದ ಸಂಘಟನಾ ಶಕ್ತಿಯ ಧಾರೆ ಎರೆದು ಕನ್ನಡಿಗರನ್ನು ಚಿರಋಣಿಗಳನ್ನಾಗಿ ಮಾಡಿದ್ದಾರೆ. ಅವರ ಕೃತಿ ಸಂಚಯ ಮತ್ತು ವ್ಯಕ್ತಿಜೀವನವೇ ಒಂದು ಕಥೆ, ಸಣ್ಣ ಕಥೆಯಲ್ಲಿ ದೊಡ್ಡ ಕಥೆ, ದೊಡ್ಡದಾಗಿ ಬೆಳೆವ ಕಥೆ, ಒಬ್ಬನೇ ಇಷ್ಟು ಬರೆದನೇ, ಇಷ್ಟನ್ನು ಪ್ರಕಟಿಸಿದನೆ? ಎಂದು ಮುಂದಿನವರು ಅಚ್ಚರಿ ಪಡುವಂಥ ದಂತಕಥೆ.

ಕನ್ನಡ ಮಾಧ್ಯಮದ ಉತ್ಸಾಹ ಸಕಾಲಿಕವೆ? ಸಾಧುವೆ? ಎಂದು ಮಾಸ್ತಿಯವರನ್ನು ಪ್ರಶ್ನಿಸಿದಾಗ ಒಂದೇ ಮಾತಿನಲ್ಲಿ ಅವರು ತಮ್ಮ ನಿಲುವನ್ನು ಸೂಚಿಸಿದರು. 'ಕನ್ನಡ ನಮ್ಮ ಬದುಕಿನ ಭಾಷೆ. ಅದರ ಬಗ್ಗೆ ಉತ್ಸಾಹ ಎಂದೂ ಸಾಧುವಾದದ್ದೇ. ನನ್ನ ದೃಷ್ಟಿಯಲ್ಲಿ ೬೦ ವರ್ಷಗಳಷ್ಟು ಸಾವಕಾಶವಾಗಿ ಈ ಕೆಲಸ ನಡೆಯುತ್ತಿದೆ. ೧೯೧೬ರಲ್ಲಿ ನಾನು ಈ ವಿಷಯದ ಅನಿವಾರ್ಯತೆ ತಿಳಿಸಿದ್ದುಂಟು. ಆದರೆ ಬೇರೆ ಇಂಗ್ಲಿಷ್, ಹಿಂದೀ ಬಿಡಬೇಕಾಗಿಲ್ಲ. ತ್ರಿಭಾಷಾ ಸೂತ್ರ ಒಳ್ಳೆಯದು'. ಬೆಂಗಳೂರು ಬುಕ್ ಬ್ಯುರೋದಲ್ಲಿ ಮಾಸ್ತಿ ಗ್ರಂಥಗಳ ಪ್ರದರ್ಶನದ ಮಾತು ಬಂದಾಗ ನಾನು 'ಯಾರೋ ಹೊರಗಿನವರಂತೆ ಇದರ ಮಾಲಕರು" ಎಂದೆ. ಅದಕ್ಕೆ ಮಾಸ್ತಿ 'ಕನ್ನಡದ ಕೆಲಸ ಮಾಡುವ ಕನ್ನಡ ಪುಸ್ತಕ ಮಾರುವ ಈ ಮನುಷ್ಯ ಕರ್ನಾಟಕದೊಳಗೇ ತನ್ನ ಕಾರ್ಯ ನಡೆಸುವುದರಿಂದ ಕನ್ನಡಿಗನೇ ಎನ್ನಬೇಕು' ಎಂದರು. ಕನ್ನಡ ಸಾಹಿತ್ಯ ಪರಿಷತ್ತು ಕನ್ನಡದ ಒಂದು ನೆಲೆ, ಅದು ನಡೆಸುವ ಪರಿಷೆ ಸಮ್ಮೇಳನಕ್ಕೂ ನಮ್ಮ ನಾಡಿನ ಸಾಮಾಜಿಕ ಪರಿಸರದಲ್ಲಿ ಅರ್ಥವುಂಟೆಂದು ಸೂಚಿಸಿದರು. ದೇವರನ್ನು ರಥದಲ್ಲಿರಿಸಿ ಎಲ್ಲರೂ ಭಕ್ತಿ ಪುರಸ್ಸರವಾಗಿ

ಜಾತ್ರೆ ಸೇರುವಂತೆ, ಸಾಹಿತ್ಯ ದೇವತೆಯ ತೇರನ್ನು ಕನ್ನಡ ಜನಪದವೆಲ್ಲ ಸೇರಿ ಎಳೆಯುವುದು ಯಾಕೆ ಒಳ್ಳೆಯದಲ್ಲ? ಎಂದು ಪ್ರಶ್ನಿಸಿದರು.

'ನನ್ನ ಮನೆಯವರು ಈಚೆಗೆ ತೀರಿಕೊಂಡಮೇಲೆ ನನ್ನ ಅಳಿಯ ಮಗಳು ಬಂದು ಈ ಮನೆಯಲ್ಲಿದ್ದು ನನ್ನ ನೋಡಿಕೊಳ್ಳುತ್ತಿದ್ದಾರೆ. ಇದೊಂದು ದೈವ ಪ್ರೇರಣೆ' ಎನ್ನುವ, ೪೦ ವರ್ಷಗಳಲ್ಲಿ ಸರಾಸರಿ ವರ್ಷವೊಂದಕ್ಕೆ ೭೫೦ ರೂಪಾಯಿ ಲಾಭ ಪಡೆಯುವ ಮಹಾ ವ್ಯಾಪಾರವನ್ನೂ ಸಂತೋಷದಿಂದ ನಡೆಸಿದ, ಅನೇಕ ಕಿರಿ ಸಾಹಿತಿಗಳಿಗೆ ಕೈಯಿಂದ ಹಣಕೊಟ್ಟು ನೆರವಾಗುವ, ಯಾವ ಕನ್ನಡದ ಕೆಲಸಕ್ಕೆ ಕರೆದರೂ ಒಲ್ಲೆನೆನ್ನದ ಈ ಮಹಾಚೇತನವನ್ನು ಕಂಡಾಗ 'ಶಾಂತೀರಸವೇ ಪ್ರೀತೀಯಿಂದ 'ಮೈದೋರೀತಣ್ಣಾ' ಎಂಬ ಬೇಂದ್ರೆಯವರ ಹಾಡು ನೆನಪಿಗೆ ಬರುತ್ತದೆ: ಮುಂಬಾಗಿಲಿಗೆ ಬಂದು ನಮ್ಮನ್ನು ಹಿರಿಯರು ಬೀಳ್ಕೊಟ್ಟ ಮೇಲೆ ಆ ಚಿಕ್ಕ ಮನೆಯತ್ತ ಹಿನ್ನೋಟ ಬೀರಿದಾಗ ಆ ಚಿಕ್ಕ ಬಂಗಲೆ, ಶ್ರೀನಿವಾಸ ಮಂದಿರ, ೪೩–೪೪ ಗವಿಪುರ ವಿಸ್ತರಣ ಅಷ್ಟೇ ಆಗಿರಲಿಲ್ಲ, ಕನ್ನಡದ ಹೃತ್ಕೋಶ, ಸುಹೃತ್ಕೋಶ ವಿಸ್ತರಣವೂ ಆಗಿತ್ತು.

## ಉಳಿಯುವ ಮಾತು

ಸಾವಿರ ವರ್ಷದ ಹಿಂದೆ ಪಂಪನನ್ನು ಪಡೆದ ನಾಡು, ಅದಾದ ಶತಮಾನ ಶತಮಾನ ಅಂತರಗಳಲ್ಲಿ ಬಸವನನ್ನು, ಕುಮಾರವ್ಯಾಸನನ್ನು, ಚಿಕದೇವರಾಜನನ್ನು ಪಡೆದ ನಾಡು, ಎಷ್ಟೋ ಶತಮಾನದ ಹಿಂದೆ "ಯಂ ಶೈವಾಃ ಸಮುಪಾಸತೇ" ಎಂಬ ಶ್ಲೋಕದಲ್ಲಿ ಸರ್ವಮತ ಸಮನ್ವಯವನ್ನು ಮಾಡಿದ ನಾಡು, ಸದ್ಯದ ಕಾಲದಲ್ಲಿ ಎಂತೋ ಕುಗ್ಗಿದಂತೆ ಕಂಡ ಮಾತ್ರಕ್ಕೆ ಜನದ ಬಾಳ್ವೆಯಲ್ಲಿ ಅಂದಿನ ಹಿರಿಮೆ ಇಲ್ಲದೆ ಹೋಯಿತೆಂದು ತಿಳಿಯುವುದು ತಪ್ಪು......

ಜೀವನದ ನಡೆಗೆ ಹೊಣೆಯಾದ ಕಲ್ಯಾಣಕಾರಕ ಸತ್ವ ಕಾಲ ಸ್ಥಳಗಳ ಪಕ್ಷಪಾತವನ್ನು ಕಾಣದ ಸತ್ವ. ಎಲ್ಲಿ ಎಂದು ಯಾರು ಬೇಡಿ ಕೈ ನೀಡಿದರೆ ಅಲ್ಲಿ ಅಂದು ಅವರ ಬೊಗಸೆಯನ್ನು ಅದು ಶಿವ ತತ್ವ ದಿಂದ ತುಂಬುತ್ತದೆ. ನಮ್ಮ ಜನತೆಯ ಶ್ರೇಯಸ್ಸು ಯಾವುದೆಂದು ತಿಳಿದು ನಾಡ ಪ್ರಮುಖರೆಲ್ಲ ಅದನ್ನು ಸಾಧಿಸಲು ಬಯಸಿದರೆ ಅದು ಸಿದ್ಧಿಯಾಗುವುದಕ್ಕೆ ಬಹು ಕಾಲವೇನೂ ಆಗುವುದಿಲ್ಲ. ಒಮ್ಮುಖವಾದ ಪ್ರಯತ್ನವೊಂದೇ ಈಗ ಅವಶ್ಯವಾಗಿರುವುದು. ಅದರ ಬಗ್ಗೆ ನಾವೆಲ್ಲ ಮನಸ್ಸು ಮಾಡಬೇಕು.

oo oo oo

ಬಾಳು ಸುಖವಾಗಿರಲು ಯೋಗ, ಕ್ಷೇಮ, ಎರಡೂ ಬೇಕು. ಹೊಸತಾಗಿ ಬರುವುದು ಯೋಗ, ಇರುವ ಒಳ್ಳಿತು ಕಳೆಯದೆ ಇರುವುದು ಕ್ಷೇಮ. ಹೊಸ ಸಾಹಿತ್ಯವನ್ನು ಮಾಡುವವರ ದೃಷ್ಟಿ ಯೋಗದ ಕಡೆಗಿರುತ್ತದೆ. ಹಳೆಯದರ ರುಚಿಗೆ ಒಗ್ಗಿರುವ ನಾಲಗೆ ಹೊಸದನ್ನು ಕುರಿತು ಸ್ವಲ್ಪ ಶಂಕೆ ತೋರುವುದು ಸಹಜ. ಆ ನಾಲಗೆಯನ್ನು ಒಲಿಸಿ, ರಮಿಸಿ ಈ ಯೋಗದಿಂದ ನಿನ್ನ ಕ್ಷೇಮಕ್ಕೆ ಭಯವಿಲ್ಲ ಎಂದು ನಂಬಿಕೆ ಹುಟ್ಟಿಸಿ ಹೊಸದೂ ಉಪಾದೇಯ ಎಂದು ಸಿದ್ಧಾಂತ ಮಾಡುವುದು ಆಗ್ಯೆ ತುಂಬ ಆವಶ್ಯಕ; ಎಷ್ಟು ಆವಶ್ಯಕವೋ ಅಷ್ಟೇ ಕಷ್ಟ.

oo oo oo

...ಇಲ್ಲಿ ವಾದ ಮುಖ್ಯವಲ್ಲ. ನನ್ನ ವಾದವನ್ನು ಒಪ್ಪಬೇಕೆಂದೂ ಈ ಮಿತ್ರರನ್ನು ನಾನು ಒತ್ತಾಯ ಮಾಡುವುದಿಲ್ಲ. ನಿಮ್ಮದೊಂದು ಗುಂಪು ಕಟ್ಟಿಕೊಳ್ಳಬೇಡಿ ಎಂದು ಅವರನ್ನು ಬೇಡುತ್ತೇನೆ. ಗುಂಪು ಕಟ್ಟಲೇಬೇಕು ಎಂದರೆ ಉಳಿದವರೆಲ್ಲ ಅಪ್ರಯೋಜಕರು ಎಂದು ಹೇಳಬೇಡಿ ಎಂದು ಬೇಡುತ್ತೇನೆ. ಅದು ನಮ್ಮ ಅಭಿಪ್ರಾಯ, ಹೇಳದೆ ಗತಿಯಿಲ್ಲ, ಎಂದರೆ ಅದನ್ನು ಹೇಳಿ, ಅದಕ್ಕೆ ಕೆಟ್ಟ ಮಾತನ್ನು

ಬಳಸಬೇಡಿ, ಎಂದು ಹೇಳುತ್ತೇನೆ. ಜೊತೆಗೆ ಎಲ್ಲರಂತೆ ನೀವೂ ಮನುಷ್ಯರು, ಅವರ ಅಭಿಪ್ರಾಯ ತಪ್ಪಾಗಿರುವದು ಹೇಗೆ ಸಾಧ್ಯವೋ ಹಾಗೆ ನಿಮ್ಮ ಅಭಿಪ್ರಾಯ ತಪ್ಪಾಗಿರುವುದೂ ಸಾಧ್ಯ, ನಿಮ್ಮ ಅಭಿಪ್ರಾಯವೇ ಸರಿ ಉಳಿದೆಲ್ಲ ಅಭಿಪ್ರಾಯ ತಪ್ಪು ಎಂದು ಹಟ ಮಾಡಬೇಡಿ, ಎಲ್ಲ ಅಭಿಪ್ರಾಯವೂ ಜನದ ಮುಂದೆ ಹಾಯಲಿ ಎಂದು ಅವರನ್ನು ಪ್ರಾರ್ಥಿಸುತ್ತೇನೆ.

(ಪ್ರಗತಿಶೀಲ ಸಾಹಿತ್ಯದ ಬಗ್ಗೆ 'ಜೀವನ'ದಲ್ಲಿ, ೧೯೪೪)

ವಿನೋದಿ, ವಿಹಾರಿ, ವಿಲಾಸಿಯ ಕೃತಿ ಸ್ವಾರ್ಥದ ಒಂದು ಸುಖಾಭಿಲಾಷೆಯಿಂದ ಪ್ರವೃತ್ತವಾಗಿದೆ. ಅದು ಜೀವನಕ್ಕೆ ಸಂಬಂಧಿಸಿದ್ದೆ; ಒಂದು ಅಲ್ಪ ಜೀವನಕ್ಕೆ. ದುಸ್ಸಾಧ್ಯವಾದ ಧ್ಯೇಯವನ್ನು ಸಾಧ್ಯ ಮಾಡಲು ಹೊರಟ ಕೃತಿ ಸ್ವಾರ್ಥವನ್ನು ಧ್ವಂಸಮಾಡಿ ಲೋಕಕಲ್ಯಾಣವನ್ನು ಬಯಸಿದ ಬಾಳಿಂದ ಹೊಮ್ಮಿದೆ. ಅದು ಕನಸಂತೆ ಕಾಣುತ್ತದೆ. ಆದರೂ ಜೀವನಕ್ಕೆ ಸಂಬಂಧಿಸಿದೆ. ಮಹಾ ಜೀವನಕ್ಕೆ.

("ಜೀವನ", ೧೯೪೬)

ಕನ್ನಡದಲ್ಲಿ ಶಬ್ದವಿಲ್ಲ ಎನ್ನುವುದು ನಮ್ಮಲ್ಲಿ ಇಂಗ್ಲೀಷ್ ಕಲಿತ ಜನರದು ಒಂದು ಹಳೆಯ ದೂರು. ಇಂಗ್ಲೀಷನ್ನು ಕಲಿತಂತೆ ಕನ್ನಡವನ್ನು ಕಲಿಯದೆ, ಇಂಗ್ಲೀಷಿನಲ್ಲಿರುವ ಪದ ಕನ್ನಡದಲ್ಲಿಲ್ಲ ಎಂದರೆ ಅದು ಭಾಷೆಯ ತಪ್ಪಲ್ಲ, ಅದನ್ನು ಕಲಿಯದವರ ತಪ್ಪು. ಕುಮಾರವ್ಯಾಸನ, ರತ್ನಾಕರವರ್ಣಿಯ, ಕನ್ನಡದಲ್ಲಿ ಶಬ್ದ ಸಾಲದೆನ್ನುವವರು ತಾವು ತಮ್ಮ ಭಾಷೆಯ ವಿಷಯದಲ್ಲಿ ಎಂಥ ಅಪಚಾರ ಮಾಡುತ್ತಿದ್ದೇವೆ ಎಂದು ಅರಿಯರು. ಆಯುಧ ಇದೆ.

ಅದನ್ನು ಹಿಡಿಯುವವರು ಬೇಕು. ಸಾಮಗ್ರಿ ಇದೆ. ಅದನ್ನು ಆಡುವವರು ಬೇಕು. ಕನ್ನಡದ ಮಕ್ಕಳು ಅದರ ವಿಪುಲ ಶಬ್ದ ಸಂಪತ್ತನ್ನು ತಿಳಿಯಬೇಕು. ಬಳಸಬೇಕು, ಬೆಳೆಸಬೇಕು. ನಮ್ಮ ನುಡಿಯನ್ನು ಹೊಸ ಜೀವನಕ್ಕೆ ತಕ್ಕ ಸರಸ್ವತಿಯಾಗಿ ಮಾಡಬೇಕು.

(ನಮ್ಮ ನುಡಿ)

# ಡಿ. ವಿ. ಜಿ.

ನಾಗಸಂದ್ರ ರಸ್ತೆಯ ಸ್ಥಾವರ ಸೊಕ್ರೆಟೀಸ್, ಕನ್ನಡದ ಕಾವ್ಯ ಮಹರ್ಷಿ, ಡಿವಿಜಿ ಮುಂದೆ ಕೂತರೆ ವೆಲ್ಸನ ಕಾಲಯಂತ್ರ ( Time Machine ) ದಲ್ಲಿ ಕೂತು ಈ ಶತಮಾನದ ಆದಿಭಾಗದ ವಾಸ್ತವ ಚಿತ್ರವನ್ನೋ ಅಥವಾ ಅದಕ್ಕೂ ಹಿಂದಿನ ಶತಮಾನ ಗಳಾಚೆಯ ದೃಶ್ಯ–ದರ್ಶನವನ್ನೋ ನೋಡಿದಂತೆ ಭಾಸವಾಗುತ್ತದೆ. 'ಸ್ಥಾಣುರಚಲೋऽಯಂ ಸನಾತನಃ' – ಎಂಬ ಭಾವನೆಯನ್ನು ನಮ್ಮಲ್ಲಿ ಮೂಡಿಸುವ ಡಿವಿಜಿ ಕನ್ನಡ ಭಾಷೆ, ಸಾಹಿತ್ಯ, ರಾಜ್ಯಾ ಡಳಿತದ ಮಹಾನ್ ಚಿಂತಕರು, ಹಿತಚಿಂತಕರು. ಭಾರತದಲ್ಲಿ ಪ್ರಜಾ ಪ್ರಭುತ್ವ – ನಿಜವಾದ ಪ್ರಜೆಯ ನಿಜವಾದ ಪ್ರಭುತ್ವ ನೆಲೆಯೂರ ಬೇಕಾದರೆ ಯಾವ ಮೂಲಭೂತ ತತ್ವಗಳನ್ನು ವ್ಯಕ್ತಿ ಮತ್ತು ಸಮಾಜ ಮೈಗೂಡಿಸಿಕೊಳ್ಳಬೇಕೋ ಅಂಥ ತತ್ವಗಳನ್ನು ಅಹರ್ನಿಶಿ ಆಲೋಚಿಸಿ, ಪ್ರಸ್ತುತ ಜೀವನಕ್ಕನ್ವಯಿಸಿ, ವೈಯಕ್ತಿಕವಾಗಿಯೂ ಸಂಸ್ಥೆಯ (ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ) ಮೂಲಕವೂ ತಿಳಿಯಪಡಿಸುತ್ತ ನಾಲ್ಕು ದಶಕಗಳಿಂದ ಕಾರ್ಯತತ್ಪರರಾಗಿರುವ ಜ್ಞಾನಯೋಗಿ, ಕರ್ಮಯೋಗಿ. ರಾಜಕೀಯ ವಿಮರ್ಶೆ, ಟೀಕೆ, ವ್ಯಂಗ್ಯ ಹೇಗಿರಬೇಕೆಂದು ತಿಳಿಯಬೇಕಾದರೆ ಡಿವಿಜಿ ಅವರ ಮುಕ್ತ ಮನಸ್ಸಿನ ನಿರ್ಭಿಡೆ ಅಭಿಪ್ರಾಯಗಳನ್ನು ಆಲಿಸಬೇಕು. ಪ್ರಜಾ ಪ್ರಭುತ್ವದ ಮೌಲ್ಯಗಳು ನೆಲಸಬೇಕಾದರೆ ಸರಕಾರದ ಧೋರಣೆ ಗಳನ್ನು ತಿಳಿವಳಿಕೆಯಿಂದ ವಿಮರ್ಶಿಸುವ ಬುದ್ಧಿ ರಾಷ್ಟ್ರಕನಲ್ಲಿ ಬೆಳೆಯಬೇಕಾಗಿದೆ. ಅಂಗಲಾಚುವ ಗುಲಾಮಿ ತೊಲಗಬೇಕಾಗಿದೆ.

ದೈನಂದಿನ ಆಗುಹೋಗುಗಳ ಕುರಿತು ನಾಲ್ಕು ಜನ ವಿಚಾರ ಶೀಲರು ಬೆರೆತು ಕಂಡದ್ದನ್ನು ಎಲ್ಲರಿಗೂ ತಿಳಿವಂತೆ ಹೇಳಬೇಕಾಗಿದೆ. ರುಚಿಗಿಂತ ಶುಚಿಗೆ ಹೆಚ್ಚು ಪ್ರಾಧಾನ್ಯ ಕೊಡುವ ವೃತ್ತಪತ್ರಿಕೆಗಳಲ್ಲಿ ಈ ಪ್ರಚಾರ ನಡೆಯಬೇಕಾಗಿದೆ. ಬ್ರಿಟಿಷರಿಂದ ಎರವಲು ಪಡೆದ ಪ್ರಜಾತಂತ್ರ ಪದ್ಧತಿ ಯಶಸ್ವಿಯಾಗಬೇಕಾದರೆ ಬ್ರಿಟಿಷ್ ನಾಗರಿಕನ ಕೆಲ ಲಕ್ಷಣಗಳಾದರೂ ನಮ್ಮ ನಾಯಕರಲ್ಲಿ, ಪ್ರಜೆಗಳಲ್ಲಿ ಸ್ಫುರಿಸ ಬೇಕು. ಹರಿವ ನೀರಲ್ಲಿ ಕೈತೊಳೆದುಕೊಳ್ಳುವ ನಿರ್ಯೋಚನೆಯ ರಾಜಕೀಯಸ್ಥರ ಅಪವಿತ್ರ ಕರಗಳಿಂದ ಪ್ರಜಾಪ್ರಭುತ್ವ ಹ್ರಾಸ ವಾಗುತ್ತಿರುವ ಸೂಚನೆ ಡಿವಿಜಿ ದೃಷ್ಟಿಗೆ ವೇದ್ಯವಾಗಿದೆ.ಅದನ್ನುಳಿ ಸಲು ಬುದ್ಧಿಜೀವಿಗಳಿಗಿರುವ ಒಂದೇ ಒಂದು ಮಾರ್ಗ – ಪ್ರಚಾರ, ತಿಳಿವಳಿಕೆ. 'ತಿಳಿ'' ಎಂಥ ಒಳ್ಳೆಯ ಕನ್ನಡ ಪದ ಎನ್ನುತ್ತಾರೆ ಡಿವಿಜಿ. ಅದರಲ್ಲಿ ಜ್ಞಾನ ಎನ್ನುವುದರ ಜತೆಗೆ ಸ್ಪಷ್ಟತ್ವ ಸೂಚಕವಾದ (clarity) ಅರ್ಥವೂ ಒಳಗೊಂಡಿದೆ. ಸ್ಪಷ್ಟವಾದದ್ದು ಇನ್ನೊ ಬ್ಬನಿಗೆ ತಿಳಿದೇ ತಿಳಿಯುತ್ತದೆ.

ನಾಗಸಂದ್ರ ರಸ್ತೆಯ ಈ ತತ್ವವೇತ್ತ ತಮ್ಮ ಜೀವಮಾನವೆಲ್ಲ ತಿಳಿವಿಗಾಗಿ ಚಡಪಡಿಸಿದ್ದಾರೆ. ತಾವು ತಿಳಿದದ್ದನ್ನು ಇತರರಿಗೆ ತಿಳಿ ಸಲು ಒದ್ದಾಡಿದ್ದಾರೆ. ವ್ಯಕ್ತಿಯ ಋಜು ಜೀವನಕ್ಕೆ ಅನುಕೂಲ ವಾದ ಸಾಮಾಜಿಕ ಪರಿಸರವನ್ನು ನಿರ್ಮಿಸುವ ತತ್ವಗಳನ್ನು ಎತ್ತಿ ಹಿಡಿದು, ಅದಕ್ಕೆ ಮಾರಕವಾದ ವಿಚಾರಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾರೆ. ಈ ನಾಡಿನ ಸಂಸ್ಕೃತಿಯ ಅಮೃತವನ್ನುಂಡು ಪರಿಪಕ್ವತೆ ಪಡೆದು ವಯೋವೃದ್ಧರಾದರೂ ವಿಚಾರಪರತೆಯಿಂದ ಪ್ರಸ್ತುತ ಪ್ರಶ್ನೆಗಳಲ್ಲಿ ಆಸಕ್ತಿ ವಹಿಸಿ ಸ್ವಾಭಿಪ್ರಾಯವನ್ನು ನಿರ್ಭೀತಿ ಯಿಂದ ಪ್ರಚುರಗೊಳಿಸುವ ಮದರಾಸಿನ ರಾಜಾಜಿ ಜತೆಗೆ ನಮ್ಮ ಡಿವಿಜಿ ಅವರನ್ನು ನಿಲ್ಲಿಸಬೇಕು. ಇವರಿಬ್ಬರೂ ದುಡಿದ ಕ್ಷೇತ್ರ ಬೇರೆಬೇರಾದರೂ ಅವರ ಮೂಲಭೂತ ಕಾಳಜಿ – ಪ್ರಜಾ

ಪ್ರಭುತ್ವದ ಉಳಿವು – ಒಂದೇ ಆಗಿರುವುದರಿಂದ ಈ ವಿಷಯದಲ್ಲಿ ಅವರು ಯಮಳರು.

ವೃತ್ತಪತ್ರಿಕೆಗಳು, ರಾಜ್ಯಶಾಸ್ತ್ರ, ರಾಜ್ಯಾಂಗ ತತ್ವಗಳು, ರಾಜಕೀಯ ಪ್ರಸಂಗಗಳು, ಗೋಖಲೆ ಸಾರ್ವಜನಿಕ ಸಂಸ್ಥೆಯ ಮುಖಪತ್ರದಲ್ಲಿ ಪ್ರತಿಸಲವೂ ಇಂಗ್ಲಿಷಿನಲ್ಲಿ ಪ್ರಕಟವಾಗುವ ಟಿಪ್ಪಣಿಗಳು – ಡಿವಿಜಿ ಅವರ ಚಿಂತನದ ಫಲಗಳು. ಸ್ಪಷ್ಟತೆ, ನಿರ್ದಿಷ್ಟತೆಗಳಿಗೆ ಡಿವಿಜಿ ಗದ್ಯಶೈಲಿ ಕನ್ನಡದಲ್ಲಿ ಈ ವಿಚಾರವಾಗಿ ಬರೆಯುವವರಿಗೆ ಆದರ್ಶವಾಗತಕ್ಕವು. ಯಾವ ಗಹನ ರಾಜಕೀಯ ತತ್ವವಾದರೂ ಡಿವಿಜಿ ಶೈಲಿಯಲ್ಲಿ ಖಚಿತವಾಗಿ, ಮೋಡಿ – ಗಂಟು ಇಲ್ಲದೆ ಮೂಡಿ ಬರುತ್ತದೆ. ಪರಕೀಯ ವಿಚಾರಧಾರೆಯನ್ನಾದರೂ ಡಿವಿಜಿ ತಿಳಿಸಿದರೆ ಅದು ನಮ್ಮದೇ ಎಂಬಂತೆ ಭಾಸವಾಗುತ್ತದೆ. ಸ್ವವಿಚಾರಮತಿಗಳಾದ ಡಿವಿಜಿ ಮಿಲ್, ಬ್ರೈಸ್ ಅವರ ಪ್ರಜಾತಂತ್ರದ ವಿಚಾರಪ್ರಣಾಳಿಯನ್ನೊಪ್ಪಿಕೊಂಡರೂ, ಮೆಂಚೆಸ್ಟರ್ ಗಾರ್ಡಿಯನ್, ಟೈಮ್ಸ್ ಅಂಥ ಮಧ್ಯ ಮಾರ್ಗದ ಪತ್ರಿಕೆಗಳನ್ನು ಪ್ರಶಂಸಿಸಿದರೂ, ತನ್ನತನವನ್ನು ತ್ಯಜಿಸಿದವರಲ್ಲ. 'ಸ್ವಾತಂತ್ರ್ಯ' ಪದಕ್ಕೆ ಅವರು ನೀಡಿದ ಅರ್ಥ – ಸಂಯಮವನ್ನೊಳಗೊಂಡ ಸ್ವಾತಂತ್ರ್ಯವೇ ಸ್ವಾತಂತ್ರ್ಯ – ಎಂಬ ವಿವೇಚನೆ, ಭಾರತೀಯ ರಾಜಕೀಯ ತತ್ವ ಚಿಂತನೆಗೆ ಒಂದು ಮೂಲಭೂತ ಕೊಡುಗೆಯಾಗಿದೆ. ನಮ್ಮ ಸಾಂಪ್ರದಾಯಿಕ ಸಂಸ್ಥೆಗಳಲ್ಲಿ ದುಡಿಯುತ್ತ ರಾಜ್ಯಶಾಸ್ತ್ರದಿಂದ ಅನ್ನ ಸಂಪಾದನೆ ಮಾಡುತ್ತಿರುವ ಪಂಡಿತರಾಗಲಿ, ರಾಜಕೀಯವನ್ನು ಅನ್ನೋಪಕರಣವನ್ನಾಗಿ ರೂಢಿಸಿಕೊಂಡಿರುವ ರಾಜಕೀಯಸ್ಥರಾಗಲಿ ನೀಡಲಾರದ ವರಗಳನ್ನು ಡಿವಿಜಿ ನಾಡಿಗೆ ದಾನಮಾಡಿದ್ದಾರೆ – ಅವರ ವಿಶಿಷ್ಟ ಗ್ರಂಥಗಳ ಮೂಲಕ. ಇತರ ಅನೇಕರು ಹೆಬ್ಬೊತ್ತಿಗೆ ಬರೆದಿರಬಹುದು, ಆದರೆ ಅವುಗಳಲ್ಲಿ ಇಂಥ ಮೌಲಿಕ ಚಿಂತನೆ, ವಿವೇಚನೆ, ಸ್ವವಿಚಾರ

ಪದ್ಧತಿ ಕಾಣುವಂತಿಲ್ಲ.

ಇಂದಿನ ನಾಡಿನ–ಕನ್ನಾಡಿನ ರಾಜಕೀಯಕ್ಕೂ ಡಿವಿಜಿ ಹೇಸಿಕೊಂಡಿದ್ದಾರೆ. ಪ್ರಜಾಪ್ರಭುತ್ವದ ಆದರ್ಶವನ್ನು ಮಣ್ಣುಗೂಡಿಸುವ 'ಮಣ್ಣಿನ ಮುದ್ದೆ'ಗಳು ಜನನಾಯಕ ಪದವಿಗೇರಿವೆ. ವಿಚಾರ ರಶ್ಮಿಯೂ ಬುದ್ಧಿಗೆ ತಾಕದ ಚುನಾವಣಾ ಪಟುಗಳಿಂದ ನಾಡಿನ ಸಾಮಾಜಿಕ ಜೀವನ ಅಸ್ತವ್ಯಸ್ತವಾಗುತ್ತಿದೆ ಎನ್ನುತ್ತಾರೆ ಅವರು. ರಾಜ್ಯದ ಒಬ್ಬ ಮುಖ್ಯ ಸಚಿವರು ಶಾಲೆಗೆ ಹೋಗಿ ಉಪಾಧ್ಯಾಯರನ್ನು ಕುರ್ಚಿಯಿಂದ ಸರಿಸಿ ನಾನೇ ಪಾಠ ಮಾಡುತ್ತೇನೆ ಎಂದ ವಾನರ ಬುದ್ಧಿಯನ್ನು ಟೀಕಿಸುತ್ತ ಈ ಪುಣ್ಯಾತ್ಮ ವಿಕ್ಟೋರಿಯಾ ಆಸ್ಪತ್ರೆಯ ಸರ್ಜನರ ಕೈಯಿಂದ ಚಾಕು ಕಿತ್ತು ಶಸ್ತ್ರಕ್ರಿಯೆ ಮಾಡದಿದ್ದುದು ಅದೇ ದೊಡ್ಡದು ಎಂದು ನಮ್ಮ ನಾಡಿನ ರಾಜಕೀಯದ ಅಧೋಗತಿಯನ್ನು ಸೂಚಿಸುತ್ತಾರೆ. ಅಲ್ಲಿಂದ ಒಮ್ಮೆಲೇ ಆದರ್ಶದ ಕಡೆಗೆ ಹಾರಿ ವಿಶ್ವೇಶ್ವರಯ್ಯನವರೊಬ್ಬರೇ ಈ ದೇಶ ನೋಡಿದ ನಾಯಕ (Statesman) ಎನ್ನುತ್ತಾರೆ. ಸ್ವಾರ್ಥದ ಲೇಪವಿಲ್ಲದ ಪರಿಶುದ್ಧ ಜೀವನ ನಡೆಸಿದ ಈ ಪುಣ್ಯಾತ್ಮರನ್ನು ದಿನವೂ ಸ್ಮರಿಸುವ ಡಿವಿಜಿ ವಿಶ್ವೇಶ್ವರಯ್ಯನವರು ವಿಶ್ರಾಂತರಾದ ಮೇಲೆ ಸರಕಾರಿ ಬಂಗಲೆ ಬಿಟ್ಟು ತಮಗೆ ಸ್ವಂತ ಮನೆಯಿಲ್ಲದೆ ಬಾಡಿಗೆ ಮನೆಯಲ್ಲಿ ಇರಲು ಅಪೇಕ್ಷೆಪಟ್ಟದ್ದನ್ನು ತಿಳಿಸುತ್ತಾರೆ. ಸರ್ ಮಿರ್ಜಾ ಅವರು ಸರ್ಕಾರಿ ಜಾಗ ಕೊಟ್ಟು ಕಟ್ಟಿಸಿಕೊಡುತ್ತೇವೆ ಎಂದರೆ ಬಾಡಿಗೆ ಕೊಟ್ಟಾದರೆ ಅದರಲ್ಲಿರುತ್ತೇನೆ ಎಂದು ನುಡಿದ ವಿಶ್ವೇಶ್ವರಯ್ಯನವರ ನಡೆವಳಿಕೆಯನ್ನು ಸಾರ್ವಜನಿಕ ಕಾರ್ಯಕರ್ತರು ಕಣ್ಣ ಮುಂದೆ ಇಟ್ಟಿರಬೇಕೆಂಬುದು ಡಿವಿಜಿಯ ಆಶಯ. ಅಧಿಕಾರದಲ್ಲಿರುವಾಗಲೂ ಆ ಮೇಲೂ ಊರೆಲ್ಲಾ ಜಾಗಹಿಡಿದು ಬಂಗಲೆ ಕಟ್ಟಿ ಮಕ್ಕಳ ಮೊಮ್ಮಕ್ಕಳ ಕಾಲದ ವರೆಗೂ ತಿಂದು ತೇಗುವಷ್ಟು ಅಡ್ಡ ಹಾದಿ ಹಿಡಿಯುವ ನೇತಾರರು ರಾಷ್ಟ್ರದ ಅವನತಿ, ದುರ್ಗತಿ

ಗಳ ಹೊಣೆ ಹೊರಬೇಕಾಗಿದೆ.

ಸಂದರ್ಭವಶಾತ್ ಡಿವಿಜಿಯವರ ನುಡಿಯಲ್ಲಿ ರೂಪುದಳೆದ ಬೆಂಗಳೂರಿನ ಕೆಲವು ಹಳೇ ಚಿತ್ರಗಳನ್ನು ಈಗ ಓದುಗರ ಮುಂದಿಡ ಬೇಕು: (೧) ಮೈಸೂರಿನ ಹೋಟೆಲ್ ಉದ್ಯಮದ ತಾತನೆನಿಸಿದ ಅಪ್ಪಣ್ಣನವರ ಕುಟುಂಬದವರೂ, ಡಿವಿಜಿಯುವರ ಮಾವನೂ ಅಕ್ಕಪಕ್ಕದ ಮನೆಗಳಲ್ಲಿದ್ದರಂತೆ. ಅಪ್ಪಣ್ಣನ ಮನೆ ನಡೆಸುತ್ತಿದ್ದ ತಿರುಮಲಸ್ವಾಮಿ ಎಂಬವರು ೧೮೯೬ರ ಪ್ಲೇಗಿಗೆ ತುತ್ತಾದ ಬಳಿಕ ಆ ಸಂಸಾರ ಪೋಷಣೆಯ ಸಲುವಾಗಿ ಡಿವಿಜಿ ಮಾವನಿಂದ ಮುನ್ನೂರು ರೂಪಾಯಿ ಸಾಲ ತೆಗೆದು ಪಾತ್ರ ಪರಡಿ ತಂದು ಆರ್ಕಾಟ್ ಶ್ರೀನಿವಾಸಾಚಾರ್ಯ ರಸ್ತೆಯಲ್ಲಿ ಅಪ್ಪಣ್ಣ ಪುಟ್ಟ ಹೋಟೆಲು ತೆಗೆದು ದುಡ್ಡಿಗೆರಡರಂತೆ ಪಕೋಡ ಮಾರಲು ತೊಡಗಿದ ದಿನಗಳನ್ನು ನೆನಸಿಕೊಂಡರು. ಅದೇ ಅಪ್ಪಣ್ಣ ಆಮೇಲೆ ವಿಶ್ವೇಶ್ವರಯ್ಯನವರ ಮಾತಿನಂತೆ ಪ್ರವಾಸೋದ್ಯಮ ಬೆಳೆಸಲು ಮಾಡರ್ನ್ ಹಿಂದೂ ಹೋಟೆಲ್ ಎಂಬ ಅಂಕಿತದಲ್ಲಿ ಮೈಸೂರು – ಬೆಂಗಳೂರುಗಳಲ್ಲಿ ದೇಶೀ ವಸತಿಗೃಹ ತೆರೆದದ್ದು, ಆತ ಮಾಡಿದ ದಾನ, ಧರ್ಮ, ವ್ಯಾಪಾರ ವ್ಯವಹಾರದಲ್ಲಿಯೂ ಒಳ್ಳೆಯತನ ಕ್ಕಿರುವ ಅವಕಾಶಗಳನ್ನು ನನ್ನ ಜತೆಗೆ ಬಂದ ಒಬ್ಬರು ಗೆಳೆಯರಿಗೆ ತಿಳಿಹೇಳಿದರು.

(೨) ಬೆಂಗಳೂರ ಹೊರವಲಯದಲ್ಲಿ ಸಿದ್ದಕಟ್ಟೆ ಎಂಬೊಂದು ಸ್ಥಳವಿದೆ. ಅಲ್ಲಿ ಗುಂಡೋಪಂತರ ಮನೆ ಉಂಟು – ಇತ್ತು – ಈಗ ಗುರುತುಹಿಡಿಯುವುದೂ ಕಷ್ಟ. ಆ ಮನೆಯ ಕಥೆ ಹೇಳುತ್ತೇನೆ. ಬದಲಾಗಿದ್ದೇವೆ, ಬದಲಾಗಿದ್ದೇವೆ ಅನ್ನುವ ನಾವುಗಳು ಯಾವುದ ರಲ್ಲಿ? ಎಂಬ ಪ್ರಶ್ನೆ ಏಳುತ್ತದೆ. ಗುಂಡೋಪಂತರ ಮನೆಯ ಪಕ್ಕ ದಲ್ಲಿ ವಾಸುದೇವಶಾಸ್ತ್ರಿಗಳ ಮನೆ. ಈ ಇಬ್ಬರ ನಡುವಣ ಸ್ಮಾರ್ತ – ವೈಷ್ಣವ ದ್ವೇಷ ಅವರ ವಿದ್ಯಾರ್ಥಿಗಳಾದ ಮಾಣವಕರಿಗೂ

ಹಬ್ಬಿ ಒಮ್ಮೆ ಮಾರಾಮಾರಿ ನಡೆಯಿತಂತೆ. ಪೊಲೀಸಿನವರು ಬಂದು ಒಂದೊಂದು ಕಡೆಯಿಂದ ಒಬ್ಬೊಬ್ಬ ಹುಡುಗನನ್ನು ಮುಚ್ಚಳಿಕೆ ಬರೆಸಿ, ಪುನರಪಿ ಇಂಥ ಘಟನೆಯಾದರೆ ಅವರಿಗೆ ಒಂದೊಂದು ವರ್ಷ ಸಜೆಯ ಬೆದರಿಕೆ ಹಾಕಿ ಜಗಳ ನಿಲ್ಲಿಸಿದರಂತೆ. ಆಗ ಶಿವಹೆಚ್ಚು, ವಿಷ್ಣು ಹೆಚ್ಚು ಎಂದು ಜಗಳ ಹಚ್ಚುತ್ತಿದ್ದ ನಾವು ಗಳು ಇವತ್ತು ರಾಷ್ಟ್ರೀಕರಣ, ಮೊನೊಪಲಿ ನಿಯಂತ್ರಣ, ಆ ಗಡಿ, ಈ ಗಡಿ, ಆ ವಾದ, ಈ ವಾದ ಎಂದು ಕಾದುತ್ತಿದ್ದೇವೆ. ಪ್ರಶ್ನೆ ಬದ ಲಾದರೂ ನಮ್ಮ ಉತ್ತರ–ಜಗಳ – ಸ್ಥಿರವಾಗಿ ನಿಂತುಬಿಟ್ಟಿದೆ. ಇಂಥ ಜಗಳಗಳು ರಾಷ್ಟ್ರ ವಿಘಾತಕ. (೩) ಬನ್ನೇರು ಘಟ್ಟದ ಹತ್ತಿರ ಒಂದು ಹಳ್ಳಿಯಿತ್ತು. ಅಲ್ಲಿ ಒಂದು ಭಾರೀ ದೊಡ್ಡ ಕುಟುಂಬ – ೧೨೦ ಜನ ಇರುವ ಮಹಾ ಪರಿಹಾರ – ನೆಲಸಿತ್ತು. ಅದಕ್ಕೊಬ್ಬ ಯಜಮಾನನಿದ್ದ – ವೃದ್ಧ. ಬಾಯಲ್ಲಿ ತಾಂಬೂಲ ತುಂಬಿ ಕೋಲು ಹಿಡಿದು, ಫೂ ಫೂ ಎಂದು ತಾಂಬೂಲ ಉಗಿ ಯುತ್ತ ಕಣ್ಣು ಕಾಣಿಸದಿದ್ದರೂ ಇಡೀ ಮನೆ ತನ್ನ ಅಬ್ಬರದಿಂದಲೇ ಶಾಂತವಾಗಿದೆ ಎಂಬ ಭ್ರಮೆಯಲ್ಲಿ ಲೀನನಾಗಿದ್ದ ಈ ಯಜಮಾನನ ಯಜಮಾನಿಕೆಗೂ ನಮ್ಮ ವಿಶಾಲ (ಏಕೀಕರಣವಾದ ಮೇಲಿನ) ಕರ್ನಾಟಕದ ಇರಸ್ತಿಕೆಗೂ ಡಿವಿಜಿ ತಾಳೆ ಹಿಡಿಯುತ್ತಾರೆ. ಕಡಿದಾಟ, ಕಚ್ಚಾಟ, ವೈಮನಸ್ಯ, ಕೂಟನೀತಿ, ಒಳಸಂಚು ಇಷ್ಟೆಲ್ಲ ನಡೆ ಯುತ್ತಿರುವಾಗಲೂ ಏಕೀಕರಣ ಸಾಧನೆಯಾಯಿತೆಂಬುದು ಆತ್ಮ ವಂಚನೆ. ಆದರ ಬದಲು ಒಡೆದರೇನು ಹಾನಿ ಎಂದು ಕೇಳುತ್ತಾರೆ ಡಿವಿಜಿ. ಇಂಗ್ಲಂಡಿನಿಂದ ಅಮೆರಿಕ, ಕೆನಡಾ ಸಿಡಿದಾಗ ಆಕಾಶ ಕಳಚಿ ಬಿತ್ತೆ? ಈಗಲೂ ಇಂಗ್ಲಂಡಿನಲ್ಲಿ ವೇಲ್ಸ್ ಮತ್ತು ಸ್ಕಾಟ್ ಲೇಂಡ್ ಸ್ವಾಯತ್ತವಾಗಿಲ್ಲವೆ? ಹೊಸ ಮೈಸೂರು ರಾಜ್ಯದ ಒಟ್ಟರ್ಥ ವಿಸ್ತಾರ ಹೆಚ್ಚು, ನಿಜ, ಆದರೆ ಯೋಗ್ಯತೆ ಕಡಿಮೆ. (ಡಿವಿಜಿ ಕನಸಿನ ಸಂಕ್ಷಿಪ್ತ ಮೈಸೂರು ರಾಜ್ಯದಲ್ಲಿ ಅವರು ನಮ್ಮ

ಜಿಲ್ಲೆಯನ್ನು ಅಂಗೀಕರಿಸಿದ್ದೊಂದು ಪುಣ್ಯ!)

ಆ ಮಾತು ಈ ಮಾತು ಆಡಿ ನಾನು ಮಾಧ್ಯಮದ ಪ್ರಶ್ನೆ ಎತ್ತಿದೆ. ಉತ್ತರ ಕೊಡಬೇಕಾದರೆ ಮೊದಲು ನಾವು ಏನಾಗ ಬೇಕೆಂದು ಯೋಚನೆ ಮಾಡತಕ್ಕದ್ದು ಎಂದರು ಡಿವಿಜಿ. ನಾವು ಋಷಿಗಳ ಹಾಗೆ ಕಂದಮೂಲಗಳನ್ನು ತಿಂದುಕೊಂಡಿರಬೇಕೆ? ಕೃಷಿಮಂಡಲದಲ್ಲೇ ಮುಳುಗಿರಬೇಕೆ? ನೂತನ ಜಾಗತಿಕ ಸನ್ನಿ ವೇಶದ ಅರಿವಿನಿಂದ ಬದುಕಬೇಕೆ? ಯಾವುದು ನಮ್ಮ ಆಯ್ಕೆ? ಇದನ್ನು ಖಚಿತಪಡಿಸಿದ ಮೇಲೆ ಯಾವ ಯಾವ ಕೆಲಸಕ್ಕೆ ಯಾವುದು ಸಾಧುವೋ ಅದನ್ನು ಸ್ವೀಕಾರ ಮಾಡಬೇಕು. ಅದು ಬೇಡ, ಇದು ಬೇಡ, ಎನ್ನುವ ಹಠ ಸಲ್ಲದು. ಮೈಸೂರಿನ ರಾಷ್ಟ್ರೀಯ ತಿನಿಸು ಹೋಳಿಗೆ, ಒಬ್ಬಟ್ಟು ಅದನ್ನೇ ಎಲ್ಲಾ ಸಂದರ್ಭಗಳಲ್ಲೂ ಬಡಿಸಿದರೆ ಹೇಗೆ? ನನ್ನ ಮಕ್ಕಳು ನನಗೆ ಅದೇನೊ ಸೋನಪಪ್ಪಡಿ ತಂದುಕೊಡುತ್ತಾರೆ. ಅದೂ ರುಚಿ ಯಾಗಿದೆ. ತಿಂದರೆ ಆರೋಗ್ಯವಾಗಿದೆ. ಎಆರ್‌ಕೃ ಜತೆ ನಾವು ೧೫ ಜನ ಎಂಟಿಆರ್‌ಗೆ ಹೋಗಿ ಮೊದಲ ಬಾರಿಗೆ ಬಾಸುಂಡಿ ತಿಂದಾಗ ಹೆಸರಿನ ಅಪರಿಚಯ ಬಲು ಬೇಗನೆ ನಾಲಗೆ ರುಚಿ ಯಿಂದಾಗಿ ಸ್ವೀಕೃತವಾಗಿ ಬಿಟ್ಟಿತು. ಆದುದರಿಂದ ಬೇಡ ಎಂಬ ಪ್ರಶ್ನೆಯೇ ಇಲ್ಲ. ಮನೆಯಲ್ಲಿ ಕಸ ಗುಡಿಸಲು, ಬಣ್ಣ ಹೊಡೆಯಲು, ಅಡುಗೆ ಮಾಡಲು ಬೇರೆ ಬೇರೆ ಜನರನ್ನು ನೇಮಿಸುವಂತೆ ಯಾವ ಕೆಲಸಕ್ಕೆ ಯಾವುದು ಬರುತ್ತದೋ ಅದನ್ನಿಟ್ಟುಕೊಳ್ಳಬೇಕು. ಕಾಲ ಧರ್ಮ ಇಂಗ್ಲಿಷನ್ನು ಬಿಡಲಾರದ ಸ್ಥಿತಿಯಲ್ಲಿ ನಮ್ಮನ್ನಿಟ್ಟಿದೆ ಎಂಬುದನ್ನು ನಿಷ್ಠಾವಂತರು ತಿಳಿಯಬೇಕು. ಯಾವುದರಲ್ಲಿಯೂ ಅತಿ ವಾದ ಸಲ್ಲದು. ಭಾಷೆ ಬೆಳೆಸುವವರು ಸರ್ಕಾರವೂ ಅಲ್ಲ. ಸಂಘಸಂಸ್ಥೆಗಳೂ ಅಲ್ಲ – ಜನ. ಈ ಜನ ಚೆನ್ನಾಗಿ ಬಾಳಬೇಕಾದರೆ ಏನೆಲ್ಲ ಮಾಡಬೇಕೋ ಅದನ್ನು ಅವರಿಗೆ ಕೊಡಬೇಕಾದುದು

ನಮ್ಮ ಕರ್ತವ್ಯ.

ಬಹುಮುಖ ಪ್ರತಿಭೆಯ ಈ ಹಿರಿಯರು ಬುದ್ಧಿಯಿಂದಲೂ ಹೃದಯದಿಂದಲೂ, ಆಸಕ್ತ ತರುಣರ ಹತ್ತಿರ ಸಂವಾದ ನಡೆಸುತ್ತಾರೆ. ತಮ್ಮ ಮಂಕುತಿಮ್ಮನ ಕಗ್ಗದ ಮೂಲಕ ಕನ್ನಡಿಗರನ್ನೂ ಮಾತನಾಡಿಸಿದ್ದಾರೆ. ನಿನ್ನೆ – ಇಂದು – ನಾಳೆಗಳ ಸಮನ್ವಯ ಮಾಡಿಕೊಳ್ಳಬಲ್ಲ ಡಿವಿಜಿ ವ್ಯಕ್ತಿತ್ವದ ಹರವು ಆಳಕ್ಕೆ ನಾಡಿನಲ್ಲಿಯೆ ಬೇರೆ ಉಪಮಾನವಿಲ್ಲ. "ಗಗನಂ ಗಗನಾಕಾರಂ ಸಾಗರಂ ಸಾಗರೋಪಮಮವ್". ಡಿವಿಜಿ = ಡಿವಿಜಿ = (= ಮಂಕುತಿಮ್ಮ ?) ಈಗಲೂ, ಇನ್ನಾವಾಗಲೂ.

## ಉಳಿಯುವ ಮಾತು

ಒಲ್ಲೆನೆನದಿರು ಬಾಳನ್, ಒಲವದೇನೆನ್ನದಿರು
ಉಲ್ಲಾಸಕೆಡೆಮಾಡು ನಿನ್ನಿನಾದನಿತು
ನಿಲ್ಲು ಕೆಚ್ಚದೆಯಿಂದಲನ್ಯಾಯಗಳನಳಿಸೆ
ಎಲ್ಲಕಂ ಸಿದ್ಧನಿರು ಮಂಕುತಿಮ್ಮ.

OO OO OO

ನಂಬದಿರ್ದನು ತಂದೆ, ನಂಬಿದನು ಪ್ರಹ್ಲಾದ
ನಂಬಿಯುಂ ನಂಬದಿರುವಿಬ್ಬಂದಿ ನೀನು
ಕಂಬದಿನೊ ಬಿಂಬದಿನೊ ಮೋಕ್ಷವವರಿಂಗಾಯ್ತು
ಸಿಂಬಳದಿ ನೊಣ ನೀನು ಮಂಕುತಿಮ್ಮ

OO OO OO

ಬಳಲಿ ನೆಲದಲಿ ಮಲಗಿ ಮೈಮರೆತು ನಿದ್ರಿಪನ
ಕುಲುಕಿ ಹಾಸಿಗೆಯುನರಸೆನುವುದುಪಕೃತಿಯೆ ?
ಒಳಿತನೆಸಗುವೆನೆಂದು ನೆಮ್ಮದಿಯ ನುಂಗದಿರು
ಸುಲಭವಲ್ಲೊಳಿತೆಸಗೆ ಮಂಕುತಿಮ್ಮ

ನಗುವು ಸಹಜದ ಧರ್ಮ ನಗಿಸುವುದು ಪರಧರ್ಮ
ನಗುವ ಕೇಳುತ ನಗುವುದತಿಶಯದ ಧರ್ಮ
ನಗುವ ನಗಿಸುವ ನಗಿಸಿ ನಗುತ ಬಾಳುವ ವರವ
ಮಿಗೆ ನೀನ್ನು ಬೇಡಿಕೊಳೊ ಮಂಕುತಿಮ್ಮ

ಂಂ ಂಂ ಂಂ

ತೊಲಗು ನಿರ್ಜನದೆಡೆಗೆ; ತೊಲಗು ಮಸಣದ ಕಡೆಗೆ
ಒಲವ ಬೇಡಿಸದೆಡೆಗೆ; ಅಳುವು ಬರದೆಡೆಗೆ
ವಿಲಯವಾಗಿಸಿ ಮನವನ್, ಅಲುಗಾಡಿಸದೆ ತುಟಿಯ
ತೊಲಗಿ ಮಲಗಲ್ಲಿ ನೀಂ ಮಂಕುತಿಮ್ಮ

(ಮಂಕುತಿಮ್ಮನ ಕಗ್ಗ, ೧೪೩)

ಭೋಗೇಚ್ಛೆ ಸ್ವಭಾವಸಿದ್ಧವಾಗಿ ಬಂದದ್ದು; ತ್ಯಾಗಬುದ್ಧಿ, ಪ್ರಯತ್ನದಿಂದ ಸಂಪಾದಿಸಬೇಕಾದದ್ದು, ಸ್ವಾಭಾವಿಕವಾದ ಮನೋವೃತ್ತಿಯನ್ನು ಸ್ವಭಾವ ದಮನದ ಕಡೆಗೆ ತಿರುಗಿಸುವುದು ಹೇಗೆ? ಇದು ಬಹು ಪುರಾತನ ಪ್ರಶ್ನೆ......ನಿರ್ಬಂಧದಿಂದ ಮಾಡಿಸಿದ ಇಂದ್ರಿಯೋಪವಾಸವು ಸ್ವತಃ ಉತ್ಪನ್ನವಾದ ವೈರಾಗ್ಯದ ಸಮಾಧಾನವನ್ನು ತರಲಾರದು; ಅದು ಅದುಮಿಟ್ಟ ಸಿಡಿಮದ್ದೇ ಆದೀತು. ಮೊದಲು ಭೋಗೇಚ್ಛೆ ನೈಜವಾದಂತೆ ಆಮೇಲೆ ತ್ಯಾಗೇಚ್ಛೆ ನೈಜವಾದರೆ ಅದು ಹಿತ......ಎಷ್ಟೋ ಸಂದರ್ಭಗಳಲ್ಲಿ ಜೀವನ್ನೈರ್ಮಲ್ಯಕ್ಕೆ ವಿಷಯಾನುಭವವೇ ವೈರಾಗ್ಯಕ್ಕಿಂತ ಹೆಚ್ಚು ಸಹಾಯವಾದೀತು. ಎಷ್ಟೋ ಮಂದಿ ಸಂನ್ಯಸ್ತರಿಗಿಂತ ಎಷ್ಟೋ ಮಂದಿ ಗೃಹಸ್ಥರು ನಿಜವಾಗಿ ಪರಿಶುದ್ಧರಾದವರಿರುತ್ತಾರೆ.

(ಉಮರನ ಒಸಗೆ)

ಮೊಟ್ಟಮೊದಲು ನಮ್ಮ ಜನಕ್ಕೆ ಬದುಕಿನಲ್ಲಿ ಶ್ರದ್ಧೆ ಹೆಚ್ಚಬೇಕು. ಬದುಕು-ಅಥವಾ ಜೀವನ-ಅಥವಾ ಬಾಳು – ಎಂಬುದು ಒಂದು ದೊಡ್ಡ ವಸ್ತು. ಬದುಕುವುದು ಪಾಪವಲ್ಲ; ಚೆನ್ನಾಗಿ ಬದುಕಲು ಪ್ರಯತ್ನಪಡುವುದು ನಾಚಿಕೆಯ ಕೆಲಸವಲ್ಲ. ಬದುಕನ್ನು ಒಳ್ಳೆಯದನ್ನಾಗಿ ಮಾಡಿಕೊಂಡು ಚೆನ್ನಾಗಿ ಉಪಯೋಗಿಸುವುದೇ ನಮಗಿರುವ ಕರ್ತವ್ಯ – ಎಂಬ ಬುದ್ಧಿ ಜನರಲ್ಲಿ ಬೇರೂರಿ ನಿಲ್ಲಬೇಕು. ಅದೇ ಪ್ರಗತಿ.

...ಚಿಲುಮೆಯಲ್ಲಿ ತಿಳಿನೀರು ಹೊಮ್ಮುವಂತೆ ಜನದ ಮನಸ್ಸಿನಲ್ಲಿ ಜೀವನೋತ್ಸಾಹವೂ ಅಂತಸ್ಸತ್ತ್ವವೂ ತಡೆಬಿಡುವಿಲ್ಲದೆ ಹೊಮ್ಮಿ ನಾಲ್ಕು ಕಡೆಗೂ ನುಗ್ಗುತ್ತಿರಬೇಕು. ಅದು ಬದುಕುವ ಬದುಕಿನ ಲಕ್ಷಣ......ಜೀವನ ದೇವರು ಕೊಟ್ಟ ವರ; ಜೀವನವನ್ನು ಅಂದಗೊಳಿಸುವುದೇ ನಾವು ದೇವರಿಗೆ ಸಲ್ಲಿಸುವ ಕೃತಜ್ಞತೆ. ಜೀವನ ಸಮೃದ್ಧಿ, ಜೀವನ ಸಂಸ್ಕಾರ, ಜೀವನ ಸೌಂದರ್ಯ ಇದು ಬರಿಯ ಐಹಿಕಾಸಕ್ತಿಯಲ್ಲ, ಚಾರ್ವಾಕತನವಲ್ಲ, ಭೋಗನಿಷ್ಠೆಯಲ್ಲ; ಅದು ವೇದವೇದಾಂತಗಳ ಸಾರಾಂಶ. (ಬಾಳಿಗೊಂದು ನಂಬಿಕೆ)

ಸಾಹಿತ್ಯವು ಪ್ರಪಂಚದ ಮಹಾಶಕ್ತಿಗಳಲ್ಲಿ ಒಂದು......ಅದು ಪೌರುಷದ ಒಂದು ರೂಪ. ಆ ಪೌರುಷ ಪ್ರಕಾಶದಲ್ಲಿ ಒಂದು ಭಾಗವು ಬಾಹ್ಯ ಸೃಷ್ಟಿಯನ್ನು ಕುರಿತ ವಿಜ್ಞಾನ ಅಥವಾ ಶಾಸ್ತ್ರ ಸಾಹಿತ್ಯ; ಇನ್ನೊಂದು ಭಾಗವು ಅಂತರಂಗಪರಿಪಾಕವನ್ನು ಕುರಿತ ಕಾವ್ಯ ಸಾಹಿತ್ಯ ಅಥವಾ ಕಲೆ. ಒಟ್ಟಿನಲ್ಲಿ ಮನುಷ್ಯನ ಮನೋಭಾವ, ಬುದ್ಧಿ, ಪರಿಶ್ರಮ, ತಿಳಿವಳಿಕೆ, ನಂಬಿಕೆ, ಆಶೆ, ಅನುಭವ, ಆಲೋಚನೆ, ಅಭಿಪ್ರಾಯ, ಮತ, ಚಿಂತೆ, ಸಿದ್ಧಾಂತ – ಇವು ಸಾಹಿತ್ಯದ ಸಾರಾಂಶ.

(ಸಾಹಿತ್ಯ ಶಕ್ತಿ)

ಬದುಕಬೇಕು, ಭೋಗವೇ ದೊಡ್ಡದೆಂದುಕೊಳ್ಳದೆ ಬದುಕಬೇಕು; ಈಶ್ವರ ಸೇವೆಗಾಗಿ ಬದುಕಬೇಕು. ಲೋಕಕಾರ್ಯಗಳನ್ನು ಮಾಡಬೇಕು. ಸ್ವಾರ್ಥದ ಸೋಂಕಿಲ್ಲದೆ ಮಾಡಬೇಕು. ಸಂತೋಷಪಡಬೇಕು, ಅಹಂಕಾರ, ಮಮಕಾರಗಳನ್ನು ದೂರಮಾಡಿ ಸಂತೋಷಪಡಬೇಕು. ಪ್ರವೃತ್ತಿ ಇಲ್ಲದೆ – ಲೌಕಿಕ ಜೀವನವಿಲ್ಲದೆ – ಅಂತರಂಗ ಶೋಧನೆಯಿಲ್ಲ. ಅಂತರಂಗ ಶೋಧನೆಯಿಲ್ಲದೆ ನಿವೃತ್ತಿಗೆ ಸಂನ್ಯಾಸಕ್ಕೆ – ಸಾರ್ಥಕ್ಯವಿಲ್ಲ...... ಲೋಕಾಸಕ್ತಿ, ಸ್ವಾರ್ಥ ವಿರಕ್ತಿಗಳೆರಡಕ್ಕೂ ಜೋಡಿಗೂಡಿಸಿ ಬಾಳಬಲ್ಲವನೇ ಯೋಗಿ. ಅವನನ್ನು ಯಾವ ದೋಷವೂ, ಯಾವ ದುಃಖವೂ ಮುಟ್ಟದು. ಇದು ಈಶೋಪನಿಷತ್ತಿನ ಬೋಧನೆ.

(ಈಶೋಪನಿಷತ್ತು)

ಮಾನವ ಸಂಸ್ಕಾರಕಥ-
ರ್ಮಾನುವ್ರತಮಕ್ಕೆ ಸಾರ್ವಜನಿಕ ವಿಚಾರಂ
ಜ್ಞಾನಿಯಿನಕ್ಕುಂ ಶುಭಸಂ-
ಧಾನಂ ರಾಜ್ಯಾದಿ ಲೌಕಿಕ ವ್ಯವಹೃತಿಯೊಳ್ ॥

(ವಸಂತ ಕುಸುಮಾಂಜಲಿ)

ಐವತ್ತು ಕ್ಷೇತ್ರಗಳಲ್ಲಿ ವ್ಯಕ್ತಿಯದು ಮೇಲ್ಗೈ; ಇನ್ನೈವತ್ತರಲ್ಲಿ ಸಮಾಜದ್ದು ಮೇಲ್ಗೈ. ಎಲ್ಲೆಲ್ಲಿ ಯಾರ್ಯಾರದು ಎಷ್ಟೆಷ್ಟು ಮಟ್ಟಿಗೆ ಮೇಲ್ಗೈ? ಇದೇ ಪ್ರಶ್ನೆ. ರಾಜ್ಯೋಪದ್ರವದ ಸಂದರ್ಭದಲ್ಲಿ ಸಮಾಜದ್ದೇ ಮೇಲ್ಗೈ; ನ್ಯಾಯೋದ್ಧಾರ ವಿಚಾರದಲ್ಲಿ ಸಮಾಜದ್ದೇ ಮೇಲ್ಗೈ. ಆದರೆ ವ್ಯಕ್ತಿಯ ಅಂತರಂಗ ಜೀವನದಲ್ಲಿ, ಅವನ ಆತ್ಮೀಯ ಬಾಂಧವ್ಯಗಳಲ್ಲಿ, ಅವನ ಕಲಾವಿನೋದದಲ್ಲಿ, ಅವನ ಆಧ್ಯಾತ್ಮಿಕ ಹವ್ಯಾಸಗಳಲ್ಲಿ ವ್ಯಕ್ತಿಯದೇ ಮೇಲ್ಗೈ. ಎಂದರೆ

ರಾಜ್ಯಕ್ಕೂ ಪ್ರಜಾವ್ಯಕ್ತಿಗೂ ಇರುವ ಸಂಬಂಧಗಳಲ್ಲಿ ಕೂಡಿದಷ್ಟು ಕೊಂಚ ಕ್ಷೇತ್ರವನ್ನು – ಎಷ್ಟು ಅನಿವಾರ್ಯವೋ ಅಷ್ಟು ಮಾತ್ರವನ್ನು ರಾಜ್ಯಕ್ಕೆ ಬಿಟ್ಟುಕೊಡತಕ್ಕದ್ದು; ಮತ್ತು ಎಷ್ಟು ವಿಶಾಲ ಕ್ಷೇತ್ರವನ್ನು ವ್ಯಕ್ತಿಗೆ ಉಳಿಸಿಕೊಡುವುದು ಸಾಧ್ಯವೋ ಅಷ್ಟನ್ನು ಅವನ ವಶಕ್ಕೆ ಉಳಿಸಿಕೊಡುವುದು – ಇದು ಈ ಜಿಜ್ಞಾಸೆಯಿಂದ ಫಲಿಸುವ ನೀತಿ. ರಾಜ್ಯದ ಎಲ್ಲ ಅಭಿವೃದ್ಧಿಗೂ ಶಕ್ತಿ ಸಾಹಸಗಳಿಗೂ ಬೀಜಪ್ರಾಯವಾದದ್ದು ವ್ಯಕ್ತಿ ಪ್ರಜೆಯ ಉತ್ಸಾಹ, ವ್ಯಕ್ತಿ ಪ್ರಜೆಯ ಶ್ರದ್ಧೆ, ವ್ಯಕ್ತಿ ಪ್ರಜೆಯ ಪ್ರಯತ್ನ. ಅದೇ ರಾಜ್ಯ ಜೀವನದ ತಾಯ್ಬೇರು.

(ರಾಜಕೀಯ ಪ್ರಸಂಗಗಳು–೨)

# ಬೇಂದ್ರೆ

ಒಳಕ್ಕೆ ಹೋಗಿ ೧೩×೧೩=೧೬೯ ಚೌಕುಗಳುಳ್ಳ ಒಂದು ಮಣೆಯನ್ನು ತಂದರು; ಅದರೊಳಗೆ ಇಡಬಹುದಾದ ೧೬೯ ದಾಳ (ಇಷ್ಟಿ)ಗಳನ್ನು ತಂದರು. ಸದ್ಯ ನಾನು ಇದರೊಳಗಿದ್ದೇನೆ ಎಂದರು. ನಮ್ಮಲ್ಲಿ ದೇವರು ಲೀಲಾನಾಟಕ ಸೂತ್ರಧಾರ ಎಂದ ಹಾಗೆ ಗ್ರೀಕರಲ್ಲಿ ಆತ ಜ್ಯಾಮಿತಿಯಲ್ಲಿ ತಲ್ಲೀನನಾಗಿರುತ್ತಾನೆಂಬ ಒಂದು ನಂಬಿಕೆಯುಂಟು ಎಂದು ನಾನೊಂದು ಉಪಮಾನ ನೀಡಿದೆ. ಸಂಖ್ಯಾಶಾಸ್ತ್ರವನ್ನೂ ವೇದಾಂತ ವಿಜ್ಞಾನವನ್ನೂ (ಜ್ಞಾನಂ ವಿಜ್ಞಾನಸಹಿತಂ) ಸಮನ್ವಯಗೊಳಿಸಿದರೆ ಜಗತ್ತಿನ ಒಗಟಿಗೆ ಉತ್ತರ ದೊರೆಯುವುದೆಂಬ ವಿಶ್ವಾಸವುಳ್ಳ ೭೦ರ ತರುವಾಯದ ಕವಿ ಬೇಂದ್ರೆ ಈಗ ಕಾವ್ಯಕ್ಕಿಂತ ಹೆಚ್ಚಾಗಿ ಗಣಿತದ ಬಗ್ಗೆ ಆಲೋಚನೆ ತೊಡಗಿಸಿದ್ದಾರೆ. ಅಂತರಂಗದಲ್ಲಿ ಕ್ಷೋಭೆಯನ್ನುಂಟುಮಾಡುತ್ತಿರುವ ಮಹೋರ್ಮಿಸದೃಶ ಪ್ರಶ್ನೆಗಳಿಗೆ ಉತ್ತರ ಅನ್ವೇಷಿಸುತ್ತಿದ್ದಾರೆ. ಆರ್ಷೇಯ ಸಾಂಪ್ರದಾಯಿಕ ಚಿದ್ಭೂಮಿಕೆಯಿಂದ ಉತ್ಪನ್ನವಾಗುವ ತಮ್ಮ ಪ್ರಶ್ನೆಗಳಿಗೆ ತಂತ್ರವಿಜ್ಞಾನ ಜವಾಬು ನೀಡೀತೇ ಎಂದು ಗಣಿತಜ್ಞರನ್ನೂ, ವಿಜ್ಞಾನಿಗಳನ್ನೂ ಏಕೆ ಕಂಪ್ಯೂಟರುಗಳನ್ನೂ ಏಕಪ್ರಕಾರವಾಗಿ ಕಲಕಿ, ಕೆದಕಿ, ಬೆದಕಿ, ಆಲ್ಲಾಡಿಸುತ್ತಿದ್ದಾರೆ. ಸ್ವ-ಸಂಶೋಧನೆಯ ವಿಲಕ್ಷಣ ಸಂಖ್ಯೆಗಳ ಅಂತರರ್ಥವನ್ನು ವಿಜ್ಞಾನದ ರೀತ್ಯಾ ನಿರೂಪಿಸಲು ಬಂದೀತೆ ಎಂದು ತಡಕುತ್ತಿದ್ದಾರೆ. ಪದಗಳ ಗಾರುಡಿಯಿಂದ ಮೃಣ್ಮಯವನ್ನು ಚಿನ್ಮಯವನ್ನಾಗಿ ಮಾಡಿದ ಕಾವ್ಯರ್ಷಿ ಈಗ ವಾಗರ್ಥಪ್ರತಿಪತ್ತಿಗೆ

ನೂರು ಯೋಜನ ಎತ್ತರದಲ್ಲಿ ಸಾಮಾನ್ಯರ ಎಟಕಿಗೆ ಬಲು ದೂರ ದಲ್ಲಿ, ಏಕಾಕಿಯಾಗಿ ಸಂಚರಿಸುತ್ತಿದ್ದಾರೆ. 'ಹಕ್ಕಿ ಹಾರುತಿದೆ, ನೋಡಿದಿರಾ ?'

ಈ ವರ್ಷ ಅಕ್ಷಯತೃತೀಯಾದಂದು ಪ್ರಕಟವಾದ ಒಂದು ಕರಪತ್ರದಲ್ಲಿ, ಅವರ ವೈಜ್ಞಾನಿಕ ಸಂಶೋಧನೆಗೆ 'ವಿಶ್ವಧಾರಣ ಸೂತ್ರ' ಎಂದು ನಾಮಕರಣವಾಯಿತು. ಇದು ಬ್ರಹ್ಮಾಂಡ ನಿಯಂತ್ರಣದ ಏಕಮೇವ ಸೂತ್ರ. 'ಮೆಂಡಲೀಫನು ತನ್ನ ಪೀರಿ ಯಾಡಿಕಲ್ ಟೇಬಲ್ಲಿನಲ್ಲಿ ೯೨ನೆಯ ಸಂಖ್ಯೆಯ ಪದಾರ್ಥದ ವರೆಗೆ ಕಂಡುಹಿಡಿದಿದ್ದ. ಇತ್ತೀಚಿನ ವಿಜ್ಞಾನಿಗಳು ೧೦೩ ಸಂಖ್ಯೆಯ ಪದಾರ್ಥದ ವರೆಗೆ ಶೋಧನೆ ಮಾಡಿದ್ದಾರೆ. ಅವರು ೧೦೫ ಮುಟ್ಟ ಬಹುದು' ಎಂದು ಅಮೇರಿಕದ ವಿಜ್ಞಾನಿಗಳು ದ್ರವ್ಯ ಸಂಖ್ಯೆ ಯನ್ನು ೧೦೫ಕ್ಕೇರಿಸುವ ಮೊದಲೇ ಆವಿಷ್ಕಾರ ಮಾಡಿದ್ದಾರೆ. ಸಾಂಖ್ಯಶಾಸ್ತ್ರ ಮತ್ತು ದರ್ಶನಶಾಸ್ತ್ರಗಳ ಆಧಾರದ ಮೇಲೆ ಕಟ್ಟಿರುವ ಈ ವಿಶ್ವಧಾರಣ ಸೂತ್ರದಂತೆ ೧೧೩ನೇ ರಸದ್ರವ್ಯ 'ಕಪಿಲ ಜ್ಯೋತಿ'ಯನ್ನು ಮನುಷ್ಯರು ಕಂಡುಹಿಡಿದಾಗ ಉತ್ಪಾತ ಗಳಾಗುತ್ತವೆ. ೧೧೧ನೇ ದ್ರವ್ಯ ಪ್ರಕಟವಾದಾಗ ರಾಷ್ಟ್ರಗಳು ಮದಾಂಧ ವರ್ತನೆ ತೋರಿಯಾವು. 'ಹಿರಣ್ಯಕಶಿಪು'ವನ್ನು ತಡೆಯಲು ನಾರಸಿಂಹ ಬರಬೇಕಾಯಿತು. ಕಪಿಲಾಗ್ನಿ ಸ್ಫೋಟ ವಾದಾಗ ಬಂಗಾಲ ಭೂಖಂಡ ಮುಳುಗಡೆಯಾಗಿ ಬಂಗಾಲ ಆಖಾತ ನಿರ್ಮಾಣವಾಯಿತು. ಆದ್ದರಿಂದ ೧೧೩ ದಾಟುವುದು ವಿಜ್ಞಾನಿಗಳಿಗೂ ಕಠಿನ, ಹಾಗೇನಾದರೂ ಆದರೆ –೨೭೬°ಶೀತೋ ಷ್ಣದಲ್ಲಿ ಕಂಡುಹಿಡಿಯಬೇಕಾದೀತು. ಹೀಗೆ ಸಂಖ್ಯೆ, ವಿಜ್ಞಾನ, ವೈದಿಕ ನಿದರ್ಶನ, ಅನ್ವೇಷಣೆ, ದರ್ಶನ – ಪುಂಖಾನುಪುಂಖವಾಗಿ ಎದ್ದು ಬಿದ್ದು ಹೊರಳುವ ವಿದ್ಯುಲ್ಲೇಖ – ಹಕ್ಕಿ ಹಾರುತಿದೆ ನೋಡಿದಿರಾ ?

ಮೂರು ವರ್ಷಗಳ ಹಿಂದೆ ಮಹಾಕವಿ ಬೆಂಗಳೂರಿನಿಂದ ಉಡುಪಿಗೆ ದಯಮಾಡಿಸಿದಾಗ ಒಂದು ಮಾತು ಪ್ರಾಸಂಗಿಕವಾಗಿ ಹೇಳಿದರು : 'ಎಸ್. ಕೆ. ರಾಮಚಂದ್ರರಾಯರು ರೇಖಿಸಿದ ಒಂದು ಬೇಂದ್ರೆ ಚಿತ್ರ ನೋಡಿದೆ. ಹೊರಗಣ್ಣಿಗೆ ಅದರಲ್ಲಿ ಬೇಂದ್ರೆ ಮಾತ್ರ ತೋರಿದರೆ, ಒಳಗಣ್ಣಿಗೆ ಐನ್‌ಸ್ಟೈನ್ ಬಂದು ಬೇಂದ್ರೆ ಕಿವಿ ಯಲ್ಲೇನೋ ಉಸುರುವಂತೆ ಕಂಡಿತು.' ಈ ಬ್ರಹ್ಮವಾಯುವಿನ ಜಾಡು ಹಿಡಿದು ಅಂದಿನಿಂದ ಕವಿ ಸಾಂಖ್ಯ ವಿಜ್ಞಾನಲೋಲರಾಗಿ ದ್ದಾರೆ. ಅವರು ಸಿದ್ಧಿಗೆ ಸಮೀಪವಿರುವಂತೆ ಅವರಿಗೆ ಕಾಣುವ ಸೂಚನೆ ಈ ಕೆಳಗಿನ ವಿಶ್ವಧಾರಣಸೂತ್ರದ ವಾಕ್ಯದಿಂದ ಹೊರಡು ತ್ತಿದೆ :

'Planets are linear but because of cosmic movement they become round in shape and more elliptical. At dead matter level the crystals are linear. At the cosmic level they have a rotundity. At the supra-cosmic level they become a square. It is the surpa-cosmic square that gives a solidity or togetherness'

ಇದನ್ನೇ ಒಂದು, ಒಂದೇ ಪುಟದ ಗ್ರಂಥವಾಗಿ ಸಾಂಖ್ಯರೂಪದಲ್ಲಿ ಸೆರೆಹಿಡಿದು ಈಚೆಗೆ ಪ್ರಕಟಿಸಿದ್ದಾರೆ: 'ಹದ ಇಲ್ದೆ ಪದ ಇಲ್ಲ' ಎಂದ ಕವಿಗೆ ಈ ವಿಷಯದಲ್ಲಿ ಹದ ಇಲ್ಲದ ನನ್ನಂಥವನಿಗೆ ಏನೂ ತಿಳಿಯದು ಎಂದಾಗ ಏನೆನಿಸಿತೊ. ಅಂತೂ – 'ಹಕ್ಕಿ ಹಾರುತಿದೆ ನೋಡಿದಿರಾ ?'

ದಿಙ್ಮಂಡಲಗಳಾಚೆ ಚಾಚಿದ ಈ ಕವಿಚುಂಚವನ್ನು ಭೂಮಿ ಗಭಿಮುಖವಾಗಿ ಇಳಿಸಿದಾಗ ಅಮೆರಿಕದ ಖ–ಭೌತ ವಿಜ್ಞಾನಿ ಗಳಿಗೆ ಮೊತ್ತಮೊದಲ ಬಾರಿ ಚಂದ್ರನೌಕೆಯನ್ನು ಭೂಮಿಗಿಳಿಸಿ ದಾಗ ಆದಷ್ಟೇ ಆನಂದ ನನಗೂ ಆಯಿತು. ಸಾಂಖ್ಯ ಶಾಸ್ತ್ರದಿಂದ

ಕವಿ ಕರ್ನಾಟಕಕ್ಕೆ ಅವತರಿಸಿದಾಗ, ನಾನು ಗೆದ್ದೆ ಅನಿಸಿತು. 'ಕನ್ನಡ ಏಕೀಕರಣದ ಬಗ್ಗೆ ಅದನ್ನು ನೆರವೇರಿಸುವುದರಲ್ಲಿ ಪ್ರಮುಖ ಪಾತ್ರವಹಿಸಿದ ಸಾಹಿತ್ಯಜ್ಞರಾದ ತಮಗೆ ಈಗ ಹೇಗನಿಸುತ್ತಿದೆ?' ಎಂದು ಕೇಳಿದೆ. 'ಏಕೀಕರಣ ಎಲ್ಲಿ ಆಗಿದೆ?' ಇದು ಕವಿಯ ಮರು ದನಿ, ಮರುಕ. ಕವಿಸ್ಮೃತಿ ಮತ್ತೆ ನಾಲ್ವತ್ತು ವರ್ಷ ಪೂರ್ವದ ಗೆಳೆಯರ ಗುಂಪಿನ ಚಿರನೂತನ ಚೇತನದುತ್ಸಾಹದ ಸುವರ್ಣ ಯುಗಕ್ಕೆ ಹಿಂದೆ ಸರಿಯಿತು: "ಇದೇ ಸ್ಥಳದಲ್ಲಿ 'ಸ್ವಧರ್ಮ' ಪತ್ರಿಕೆಗೆ ತಿಕೀಟು ಹಚ್ಚಿಕೊಂಡು ನಾನು ಕೂತಿರುತ್ತಿದ್ದೆ. ಈ ಕೋಣೆ, ಆ ಕೋಣೆ, ಈ ಮೂಲೆ, ಆ ಮೂಲೆಯಲ್ಲಿ ಗುಂಪಿನ ಸದಸ್ಯರು ಧ್ಯಾನಕ್ಕೆ ಕೂತಿರುತ್ತಿದ್ದರು. ಅವರ ಧ್ಯಾನ, ಕರ್ಮ, ದೃಷ್ಟಿ, ದರ್ಶನಗಳ ಕರ್ನಾಟಕ ಇನ್ನು ಉದಯವಾಗುವುದರಲ್ಲೇ ಇದೆ. ಆಲೂರ ವೆಂಕಟರಾಯರಿಗೂ ಹಿಂದೆ ವೆಂಕಟರಂಗೋಕಟ್ಟಿ ಕರ್ನಾಟಕದ ಕಲ್ಪನೆಗೆ ಮೂರ್ತರೂಪ ಕೊಟ್ಟಿದ್ದರು; ಆಲೂರರು ಗತವೈಭವ ಬರೆದು ಅದಕ್ಕೆ ನಾಲಗೆ ಕೊಟ್ಟರು; ಸಾಹಿತ್ಯದ ರಸಸೇಚನೆ ಮಾಡಿದರು. 'ನಾಡಹಬ್ಬ' ಈ ಶಬ್ದ ರೂಪಿಸಿದವರೇ ನಾವು. ೧೯೨೫ಕ್ಕೆ ಮೊದಲ ಬಾರಿಗೆ ಕರ್ನಾಟಕದಲ್ಲಿ – ನಮ್ಮ ಮನೆಯೊಳಗೇನೆ – ನಾಡಹಬ್ಬ ಆಚರಿಸಿದೆವು. ಮರುವರ್ಷದಿಂದ 'ನಾಡಹಬ್ಬ' ಧಾರವಾಡದಲ್ಲಿ ಇತರ ಕಡೆಗಳಲ್ಲೂ ಬಹಿರಂಗವಾಗಿ ಆಚರಣೆಗೆ ಬಂದಿತು. ನಾಡೆಲ್ಲ ಹರಡಿತು. ನಮ್ಮ ಕಲ್ಪನೆಯ ನಾಡನ್ನು ಕಟ್ಟುವುದು ಸುಲಭವಲ್ಲ. ಭೌತಿಕ ಪ್ರಗತಿಯಿಂದ ನಾಡಿನ ಪ್ರಗತಿಯನ್ನು ಅಳೆಯುವವರು ನಾವಲ್ಲ. ಬಲಿಯ ರಾಜ್ಯದಲ್ಲಿ ಪ್ರಜೆಗಳು ತಿಂದುಂಡು ಸುಖವಾಗಿದ್ದಾಗಲೇ ಈ ಸುಖೀ ರಾಜ್ಯಕ್ಕೆ ಅರ್ಥವಿಲ್ಲೆಂದು ವಾಮನ ತ್ರಿವಿಕ್ರಮನಾಗಿ ಬೆಳೆಯಬೇಕಾಯಿತು. ನಿಜವಾಗಿ ಬೆಳೆಯಬೇಕಾದ ಪ್ರಜಾಜನ ಐಹಿಕ ಸುಖಭೋಗ ಲೋಲುಪರಾಗಿ ಬೆಳೆಯುವುದನ್ನು ನಿಲ್ಲಿಸಿದರೆ ಯಾರಾದರೂ

ತ್ರಿವಿಕ್ರಮ ಬರಲೇಬೇಕಾಗುತ್ತದೆ."

ನಮ್ಮ ನಾಡಿನಲ್ಲಿ ಜನ ಕನ್ನಡದಲ್ಲೇ ಚಿಂತನಮಾಡಲು ಕಲಿಯದೆ ನಮ್ಮ ಸಂಸ್ಕೃತಿ ಮುಂದುವರಿದೀತೆ? ಆ ಸಲುವಾಗಿ ಉಚ್ಚ ವಿಚಾರ ಶಿಕ್ಷಣ ಮಟ್ಟದಲ್ಲಿ ಕನ್ನಡ ಮಾಧ್ಯಮವನ್ನು ಕಡ್ಡಾಯ ಮಾಡಿದರೆ ಹೇಗೆ? ಬಹಳ ಸ್ವಲ್ಪ ಜನಕ್ಕೆ ಮಾತ್ರ ಇಂಗ್ಲಿಷ್ ಕೊಟ್ಟು ಉಳಿದ ಬಹ್ವಂಶ ಜನರಿಗೆ ಕನ್ನಡವೇ ಸಾಲದೆ? ಎಂದು ಪ್ರಶ್ನಿಸಿದೆ. ಭಾಷೆ, ಸಾಹಿತ್ಯ ಮಾಧ್ಯಮಗಳ ರಾಜ್ಯದಲ್ಲಿ ಕಡ್ಡಾಯಕ್ಕೆ ಸ್ಥಾನವೇ ಇಲ್ಲ ವೆಂದು ಬೇಂದ್ರೆ ವಾದಿಸಿದರು: "ಯಾರಿಗೆ ಯಾವುದು ಬೇಕೋ ಆ ಮಾಧ್ಯಮದ ಮೂಲಕ ಅವರು ಕಲಿಯಲಿ. ಮುಕ್ತದ್ವಾರ ಸ್ವನಿರ್ಣಯ – ಇದು ಸ್ವಾತಂತ್ರ್ಯದ ದಾರಿ. ಅಲ್ಪ ಸಂಖ್ಯಾಕರು ಯಾರು, ಬಹುಸಂಖ್ಯಾಕರು ಯಾರು? ಎಂಬುದನ್ನು ಗುರುತು ಹಿಡಿದು ಬೇರ್ಪಡಿಸುವುದು ಹೇಗಂತೆ? ಕನ್ನಡ ಮಾಧ್ಯಮದ ಬಹುಸಂಖ್ಯಾಕರಲ್ಲೊಬ್ಬನಿಗೆ ಕಾಲಾನಂತರ ಇಂಗ್ಲಿಷು ಬೇಕೆಂದು ಕಂಡಾಗ ಕಲಿಸಲು ಶಕ್ಯವೆ? ನಿನಗೆ ಕನ್ನಡ, ನಿನಗೆ ಇಂಗ್ಲಿಷು, ಈ ನಿರ್ಣಯ ಮಾಡುವ ಬುದ್ಧಿವಂತರು ಯಾರು? ನಮ್ಮ ಕಾಲೇಜು ಗಳಲ್ಲಿ ಬರುವವರಲ್ಲಿ ಮಾಧ್ಯಮ ಬಿಡಿ, ನಿಜವಾದ ಜ್ಞಾನ, ಶಿಕ್ಷಣ ಪಿಪಾಸುಗಳು ಎಷ್ಟು ಮಂದಿ ಇದ್ದಾರೆ? ಬೇಡಾದ ಶಿಕ್ಷಣ ಹೊರಿಸಿ ದಂತೆ ಬೇಡವಾದ ಮಾಧ್ಯಮವನ್ನು ಹೊರಿಸುತ್ತೀರಾ? ಇದೆಲ್ಲ ಕ್ಕಿಂತ ನೀವು ಸರಿಯಾಗಿ ಅವರಿಗೆ ಕನ್ನಡ ಭಾಷೆ, ಸಾಹಿತ್ಯ ಕಲಿಸು ವುದು ಯುಕ್ತ. ನಮ್ಮ ಸುತ್ತಲಿನ ಸಾಮಾಜಿಕ ಅಭಿಪ್ರಾಯಕ್ಕೆ ಅನಿವಾರ್ಯತೆಗೆ ವಿರುದ್ಧವಾಗಿ ಈಸಬೇಡಿ. ಸವಾಯಿ ಬುದ್ಧಿವಂತ ರಾಗಬೇಡಿ' ಎಂದು ಬೇಂದ್ರೆ ಚೆಚ್ಚರು ನುಡಿ ನುಡಿದರು.

ಸಾಧನಕೇರಿಯ ಈ ಸಾಧಕನ ಮನೆಯ ಗೋಡೆ ತುಂಬ ಅರವಿಂದ, ಶ್ರೀಮಾತೆ, ನಿತ್ಯಾನಂದ, ಅಕ್ಕಲಕೋಟೆ ಸ್ವಾಮಿಗಳು – ಇಂಥ ಸಾಧುಸಂತರ ಚಿತ್ರಗಳ ಸಾಲೇ ಸಾಲು. ಅವರ ಗ್ರಂಥಾಲಯ

ಬಿದಿರು ಬೊಂಬಿನ ತೆರೆಕಪಾಟವಾದರೂ ಹೇರಳ ಪುಸ್ತಕಗಳ ನ್ನೊಳಗೊಂಡಿದೆ. ಕವಿ ಹಗಲೆಲ್ಲ ಈ ಗ್ರಂಥಗಳ ಸುತ್ತುಮುತ್ತ ಭೃಂಗದ ಬೆನ್ನೇರಿ ಬಂದ ತಮ್ಮ ಕಲ್ಪನೆಯನ್ನು ಬೆನ್ನು ಹಿಡಿದು ಸಾಗುತ್ತಾರೆ. ಡಾಕ್ಟರೇಟು ಮಾಡಿದ ಮಗನ ಬಗ್ಗೆ 'ಈತ ನನ್ನ ವಿಚಾರಗಳಲ್ಲಿ ಸೇಕಡಾ ೧೦ನ್ನಾದರೂ ಅರ್ಥಮಾಡಿಕೊಂಡಿದ್ದಾನೆ. ಆದ್ದರಿಂದ ಉಡುಪಿಗೆ ನಂಜೊತೆ ಬರುತ್ತಾನೆ' ಎನ್ನುತ್ತಾರೆ. ಪಡು ಗಡಲ ತಡಿಗೆ ನಿಂದ ಶ್ರೀಕೃಷ್ಣನ ದರ್ಶನಕ್ಕೆ ಕವಿ ನಿತ್ಯಕಾತರರು. ಅದು ಉಡುಪಿಯ ಆಕರ್ಷಣೆ. ಕನಕದಾಸರ ಉತ್ಸವಕ್ಕೆ ಬಂದವರು ಒಂದು ಕವನ ನಮ್ಮ ಮನೆಯಲ್ಲೇ ಬರೆದರು – 'ಜೀವನವೇ ಕನಕನ ಕಿಂಡಿ' ಎಂಬ ಹೃತ್ಸೂತ್ರವುಳ್ಳ ಆ ಕವನವನ್ನು ಸ್ವತಃ ಓದಿ ದರು. ಈಗಲೂ ಹೋದಲ್ಲಿ ತಮ್ಮ ಕಾವ್ಯಗಳನ್ನು ಏರು ದನಿ ಯಲ್ಲಿ ಓದುವುದೆಂದರೆ ಕವಿಗೆ ಇಷ್ಟ. ಕರ್ನಾಟಕದ ನವೋದಯ ಕಾಲದಿಂದ ಇಂದಿನ ವರೆಗೆ ಬೇಂದ್ರೆ ಎಷ್ಟು ಉಪನ್ಯಾಸ ಗಳನ್ನು ನಾಡಿನ ಒಳಗೆ ಹೊರಗೆ ಕೊಟ್ಟರೋ ತಿಳಿಯದು. ಈ ನೂರಾರು ಉಪನ್ಯಾಸಗಳ ಮನೋರಂಜಕತ್ವಕ್ಕಿಂತ ಮಿಗಿಲಾಗಿ ಅವುಗಳಲ್ಲಿ ಹುದುಗಿರುವ ವಿಚಾರ ಪದ್ಧತಿ ದುರ್ದೈವದಿಂದ ಪಂಚ ಭೂತಗಳ ಪಾಲಾಗಿ ಹೋಗಿದೆ. ಆಧುನಿಕ ಯಂತ್ರೋಪಕರಣ ಗಳಿದ್ದೂ ಕವಿಯ ಧ್ವನಿಮುದ್ರಿಕೆ ಸರಿಯಾಗಿ ಎಲ್ಲೂ ನಡೆದಿಲ್ಲ. ಇದು 'ಆಕಾಶವಾಣಿ'ಯ ಕರ್ತವ್ಯಚ್ಯುತಿ. ಬೇಂದ್ರೆ ಮಾತು 'ಇದು ಬರಿ ಬೆಳಗಲ್ಲೋ ಅಣ್ಣಾ' ಎಂಬಂತೆ ಬರಿಯ ಮಾತು ಎಂದೂ ಆಗಿರುವುದಿಲ್ಲ. ಅಂತಶ್ಚೇತನದ ಅಂತರಾಳದಿಂದ ಅನು ಭೂತಿಪೂರ್ವಕ ಹೊರಹೊಮ್ಮುವ ಪದ ಸಮುಚ್ಚಯದಿಂದ ಕವಿ ನಿಂತಲ್ಲೇ ತಮ್ಮ ಗದ್ಯಕಾವ್ಯ ಸೃಷ್ಟಿಮಾಡುತ್ತಾರೆ. ಶ್ರೋತೃ ವೃಂದ ನಿರಾಶರಾಗುವ ಸಂದರ್ಭಗಳು ವಿರಳವಾಗಿರುವುದು ಇದ ರಿಂದ. ಈಗೀಗ ಇಂಥ ಬಹಿರಂಗ ಸಭೆಗಳಿಗೆ ಕವಿ ಒಲಿಯರು. ಬದ

ಲಿಗೆ ನಾಲ್ಕಾರು ಜನ ಬನ್ನಿ, ಅಷ್ಟು ಸಾಕು ಎನ್ನುತ್ತಾರೆ. ಎಷ್ಟೇ ಕಷ್ಟವಾದರೂ ಕರೆದಲ್ಲಿಗೆ ಹೋಗಿ ಕನ್ನಡದ ಸಂದೇಶವನ್ನು ಬೀರಿದ ಬೇಂದ್ರೆ ಕನ್ನಡಿಗರ ಹೃದಯಸಿಂಹಾಸನದ ಸಿದ್ಧಾರೂಢರು. ಅವರ ಕಾವ್ಯ ಈಗೀಗ ಅರವಿಂದದರ್ಶನಸ್ನಿಗ್ಧವಾಗಿ ದುರೂಹವಾಗುತ್ತಿದೆ ಎಂಬ ಟೀಕೆ ಕೇಳಿಸುತ್ತಿದೆ. ಸಾಂಖ್ಯದ ನೆಳಲೂ ಇತ್ತೀಚೆಗಿನ ಅವರ ಕಾವ್ಯದ ಮೇಲೆ ಬಿದ್ದಿದೆ. ನಿರಂತರ ಕಾವ್ಯಸೃಷ್ಟಿ ನಿರತರಾದ ಬೇಂದ್ರೆ 'ನವ್ಯ' ಧಾಟಿಯಲ್ಲಿ ನವ್ಯರನ್ನೂ ಮೀರಿಸಿದ ಕಾವ್ಯ ಬರೆದದ್ದೂ ಉಂಟು. ಕವಿ 'ಬುವಾ' ಆಗುತ್ತಿದ್ದಾರೆ. ಆಧ್ಯಾತ್ಮದ ಜಾಡುಹಿಡಿದು ಸಂತತ್ವಕ್ಕೇರುತ್ತಿದ್ದಾರೆ ಎನ್ನುವವರೂ ಉಂಟು. ಹೇಗೂ ಸಾಧನಕೇರಿಯ ಕವಿಶ್ರೇಷ್ಠನ ಸಾಧನೆಗೆ ಇತಿಮಿತಿಯಿಲ್ಲ. ಊರ್ಧ್ವಮುಖಿಯಾಗಿ ಒಂದು ಕನ್ನಡಜೀವ ವ್ಯೋಮಪಥದಲ್ಲಿ ಸಂಚಾರ ಹೊರಟಿದೆ – ಹಕ್ಕಿ ಹಾರುತಿದೆ, ನೋಡಿದಿರಾ ? – ನೋಡಬಲ್ಲಿರಾ ?

### ಉಳಿಯುವ ಮಾತು

ಲೇಸೆ ಕೇಳಿಸಲಿ ಕಿವಿಗೆ, ನಾಲಗೆಗೆ ಲೇಸೆ ನುಡಿದು ಬರಲಿ
ಲೇಸೆ ಕಾಣಿಸಲಿ ಕಣ್ಣು, ಜಗದೊಳಗೆ ಲೇಸೆ ಹಬ್ಬುತಿರಲಿ,
ಲೇಸೆ ಕೈಗಳಿಂದಾಗುತಿರಲಿ, ತಾ ಬರಲಿ ಲೇಸೆ ನಡೆದು,
ಲೇಸನುಂಡು, ಲೇಸುಸಿರಿ, ಇಲ್ಲಿರಲಿ ಲೇಸೆ ಮೈಯ ಪಡೆದು.

(ಗಂಗಾವತರಣ)

oo oo oo

ಬಾರೊ ಸಾಧನಕೇರಿಗೆ ।
ಮರಳಿ ನಿನ್ನೀ ಊರಿಗೆ ॥
ಮಳೆಯು ಎಳೆಯುವ ತೇರಿಗೆ
ಹಸಿರು ಏರಿದೆ ಏರಿಗೆ

ಹಸಿರು ಸೇರಿದೆ ಊರಿಗೆ
ಹಸಿರು ಚಾಚಿದೆ ದಾರಿಗೆ
ನಂದನದ ತುಣುಕೊಂದು ಬಿದ್ದಿದೆ
ನೋಟ ಸೇರದು ಯಾರಿಗೆ? ॥

(ಗಂಗಾವತರಣ)

೦೦ ೦೦ ೦೦

ರಸವೆ ಜನನ
ವಿರಸ ಮರಣ
ಸಮರಸವೇ ಜೀವನ

(ಮೂರ್ತಿ)

೦೦ ೦೦ ೦೦

ದೇವನಿಗಿಂತ ಗುರುವು ಹೆಚ್ಚು ಎಂದು ಹೇಳುವದುಂಟು. ಹಾಗೆಯೇ ಕವಿಗಿಂತ ವಿಮರ್ಶಕನು ಹೆಚ್ಚಿನವನು ಎಂದು ಹೇಳಬಹುದು. ಯಾಕೆಂದರೆ ಕವಿತ್ವವನ್ನು ಕಾಣುವ, ಕಂಡು ಹಿಗ್ಗುವ ಬುದ್ಧಿಯೂ, ಹೃದಯವೂ ಇಲ್ಲದಿದ್ದರೆ ಕವಿತ್ವವು ಜಗದಲ್ಲಿದ್ದೂ ಇಲ್ಲದಂತೆ. ಸಾಮಾನ್ಯ ವಾಚಕನಿಗೂ, ಕವಿಗಳಿಗೂ ವಿಮರ್ಶಕ ಸೇತುವೆ ಇದ್ದಂತೆ. ಈ ವಿಮರ್ಶಕನ ಅಭಾವದಲ್ಲಿ ಕವಿಯು ಈ ಈ ದಂಡೆಗೆ, ವಾಚಕರು ಆ ದಂಡೆಗೆ.

('ಸಾಹಿತ್ಯ ಮತ್ತು ವಿಮರ್ಶೆ')

ವ್ಯಕ್ತಿಯ ಧರ್ಮಸಾಧನಗಳಲ್ಲಿ ಶರೀರವೇ ಮೊದಲನೆಯದು. ಮಾನವ ಸಮಾಜದ ಧರ್ಮ ಸಾಧನಗಳಲ್ಲಿ ಬಡತನವನ್ನು ಕಳೆಯುವದೆ ಮೊದಲು. ಆದರೆ ಮಾನವನು ಬಹುರೂಪನಾದ್ದರಿಂದ ಮನುವಿನ ಸ್ವರೂಪವು ಹೊಳೆಯದಾಗಿದೆ. ಅವನ ಏಕರೂಪವು ಹೊಳೆದರೆ ಒಬ್ಬನ ದೋಷವೂ ಎಲ್ಲದರೊಳಗಿನ ಕೊರತೆ ಎಂಬುದು

ಸ್ಪಷ್ಟವಾಗಬಹುದು. ಈ ಜ್ಞಾನದ ಉದಯವೆ ಆ ಕಾರ್ಯದ ಆರಂಭ. ಅಂತೆಯೆ ಬಡತನವನ್ನು ನಿರ್ಬೀಜವನ್ನಾಗಿ ಹೇಗೆ ಮಾಡುವುದೆಂಬುದೇ ಇಂದಿನ ವೇದಾಂತಿಗಳಿಗೆ ಒಗಟು; ರಾಜಕಾರಣಿಗಳ ಗುರಿ; ದುಡ್ಡುಳ್ಳವರ ಸಮಸ್ಯೆ; ಬಡವರ ಬಡಿದಾಟ. ಆದ ಕಾರಣವೆ ಅದು ಸಾಹಿತ್ಯದ ಸಾರ್ವಭೌಮ ವಸ್ತು.

('ಸಾಹಿತ್ಯ ಮತ್ತು ವಿಮರ್ಶೆ')

○○ ○○ ○○

ನಗೆಯದೊಂದು ನಾಡುಂಟು; ಅಲ್ಲಿ ಬೆಳಕಿನ ಹೊಳೆಯುಂಟು; ಅದರ ದಂಡೆಗೆ ಕಲ್ಲುಂಟು; ಮುಳ್ಳುಂಟು. ಆದರೆ ಅಲ್ಲಿ ಕಲ್ಲು ಕರಗುವವು. ಮುಳ್ಳು ಮುಳುಗುವವು. ಅಲ್ಲಿಯ ಅರಸೇ ಹಿಗ್ಗು.

(ವಿಚಾರಮಂಜರಿ)

## ಕುವೆಂಪು

ಅಖಂಡ ಕರ್ನಾಟಕದ ಕಲ್ಪನೆಯನ್ನು ಹಿಂದೂಡಲು ಯತ್ನಿಸುತ್ತಿದ್ದ ಹಳೇ ಮೈಸೂರು ಸರ್ಕಾರದ ಅವಕೃಪೆಯನ್ನು ಲೆಕ್ಕಿಸದೆ 'ಜಯ ಹೇ ಕರ್ನಾಟಕ ಮಾತೇ' ಎಂದು ಏಕೀಕೃತ ಕರ್ನಾಟಕದ ಸ್ತೋತ್ರ-ಮಾಡಿದ, ತರುಣ ಜನಾಂಗ ಪರಕೀಯ ಸಂಸ್ಕೃತಿಯ ಪ್ರಸಾರಕ್ಕೆ ಮರುಳಾಗುವ ಸಂಧಿಕಾಲದಲ್ಲಿ 'ನಿರಂಕುಶಮತಿಗಳಾಗಿ' ಎಂದು ಅವರ ಯೌವನಕ್ಕೇ ಆಹ್ವಾನವಿತ್ತ, ಇಂಗ್ಲಿಷ್ ಇಂಗ್ಲಿಷ್ ಎಂದು ಸೂಟುಧಾರಿ ಪ್ರೊಫೆಸರುಗಳು ಜಪಿಸುತ್ತಿರುವಾಗಲೆ 'ಬಲಾತ್ಕಾರದ ಇಂಗ್ಲಿಷ್ ಬೇಡ' ಎಂದು ಧಿಕ್ಕರಿಸಿದ ರಾಷ್ಟ್ರಕವಿ ಕುಪ್ಪಳ್ಳಿ ವೆಂಕಣ್ಣ ಪುಟ್ಟಪ್ಪನವರು ಹೊರ–ಒಳ ನೋಟಕ್ಕೆ ನೂರಕ್ಕೆ ನೂರೂ ಕವಿಗಳು. ಆರಡಿಗೆ ಹತ್ತಿರದ ಎತ್ತರ. ಮಾಟವಾಗಿ ಕೆತ್ತಿದ ಕೈ ಮೈ. ಆ ಅಚಂಚಲ ನೇತ್ರ–ಕವಿಗೆಂದೇ ಬ್ರಹ್ಮ ಮಾಡಿಸಿದ ಹೊರಕಟ್ಟು. ಈ ನವುರಾದ ಹಂದರದೊಳಗೆ ಸ್ವರ್ಣಕಲಶದಲ್ಲಿದ್ದಂತೆ ಕವಿತ್ವದ ನಂದಾದೀಪ ಬೆಳಗುತ್ತಿದೆ. ಕುಮಾರವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರವಾಗುವುದೆಂದು ಕಾಲದ ರಾಕೆಟಿನಲ್ಲಿ ನಮ್ಮನ್ನು ಯುಗಯುಗಗಳಾಚೆ ತಳ್ಳಿದ, ಪಂಪ–ರನ್ನ–ಜನ್ನ–ಪೊನ್ನರನ್ನು ಎದೆಗವಚಿಕೊಂಡ ಈ ರಸಋಷಿ ಒಂದು ದಿನ, 'ಮನ್ಮನೋ ಮಂದಿರಕೆ ಲೋಕಗುರುಗಳೆಲ್ಲ ಬನ್ನಿ' ಎಂದು ಆಹ್ವಾನಿಸಿ ವಾಲ್ಮೀಕಿ, ವ್ಯಾಸರ ಜೊತೆಗೆ ಡಾಂಟೆ, ಹೋಮರ, ಮಿಲ್ಟನರನ್ನೂ ತನ್ನ ಹೆಗಲ ಮೇಲೇರಿಸಿಕೊಂಡು, ಮೊಮ್ಮಕ್ಕಳಿಗೆ ಜಾತ್ರೆ ತೋರಿಸುವ ಅಜ್ಜನಂತೆ 'ಶ್ರೀ ರಾಮಾಯಣದರ್ಶನ'ವನ್ನು

ಮಾಡಿಸುವನೆಂದು ಯಾರು ಊಹಿಸಿದ್ದರು? ವಿನೋದಮಯ ತಾರುಣ್ಯದಲ್ಲಿ ಸ್ವಾರಸ್ಯವಾದ 'ಮಲೆನಾಡಿನ ಚಿತ್ರ'ಗಳನ್ನು ಬಿಡಿಸಿ, ಶೇಕ್ಸಪಿಯರನ ಕಲಾವೈಭವದ ಪರಿಣತಿಯ ಪಡಿನೆಳಲಾದ 'ರಕ್ತಾಕ್ಷಿ' ಯನ್ನು ತೆರೆದು, 'ಕಾನೂರು ಹೆಗ್ಗಡಿತಿ'ಯ ರುದ್ರಗಂಭೀರ ಕಥೆ ಯನ್ನು ಬಿತ್ತರಿಸಿ ಎಲ್ಲರಂತೆ ಈತನೂ ಒಬ್ಬ ಸಾಹಿತಿ ಆದಾನು ಎನಿಸಿದ್ದನ್ನು ಆಶ್ಚರ್ಯವತ್ ರಾಮಾಯಣದರ್ಶನಕ್ಕೆ ತಿರುಗಿಸಿ, ಮತ್ತೆ ಹತ್ತು ವರ್ಷಗಳಲ್ಲಿ ಮಲೆಗಳಲ್ಲಿ ಮದುಮಗಳ ಅನ್ವೇಷಣೆಗೆ ಹೊರಟು ಕನ್ನಡ ಸಾರಸ್ವತ ಲೋಕಕ್ಕೆ ವಿಶ್ವದರ್ಶನವನ್ನು – ಶ್ರೀಸಾಮಾನ್ಯನ ಬದುಕಿನ ಋತವನ್ನೂ, ಅನೃತವನ್ನೂ ಅನನ್ಯ ಸಾಧಾರಣವಾಗಿ ಮೂಡಿಸಿದ, ಪುನಃ ಸೃಷ್ಟಿ ಮಾಡಿದ ಈ ರಸ ಋಷಿ ಕನ್ನಡಕ್ಕೊಬ್ಬನೆ ವಾಲ್ಮೀಕಿ ವಲಂ.

ಖಾದಿಯ ಜುಬ್ಬ, ಪೈಜಾಮ ತೊಟ್ಟು ಮೈಸೂರಿನ ಒಂಟಿ ಕೊಪ್ಪಲಿನ ತುಟ್ಟತುದಿಯ ಚಿಕ್ಕ ಬಂಗಲೆಯಲ್ಲಿ ವಾಸಮಾಡು ತ್ತಿರುವ ಕುವೆಂಪು ತಾವಿರುವ ತಾವನ್ನು ಸಂಸ್ಕೃತೀಕರಿಸಿ ವಾಣೀ ವಿಲಾಸ ಮೊಹಲ್ಲಾ ಎನಿಸಿದ್ದಾದರೂ ಅವರ ಒಬ್ಬೊಂಟಿ ಸಾಹಿತ್ಯ ವ್ಯವಸಾಯದಿಂದಲೇ ಅಲ್ಲೀ ವಾಣೀವಿಲಾಸ ತೊಡಗಿದ್ದು, ಉಳಿ ದದ್ದು, ಕನ್ನಡ ಸಾಹಿತ್ಯದ ನವೋದಯದ ಕಾಲಮಾನದಲ್ಲಿ ತಮ್ಮ ಓರಗೆಯವರೊಡನೆ ಅಲ್ಲಿ ಇಲ್ಲಿ ಪರಿವ್ರಾಜಕತ್ವವನ್ನು ಮೆರೆದರೂ ತದನಂತರ ಅದೊಂದು ಶುಭಮುಹೂರ್ತದಲ್ಲಿ ಕುವೆಂಪು ಕನ್ನಡದ ಸಿದ್ಧಿಗಾಗಿ ಸ್ಥಾವರಕ್ಕೆ ಮನಸೋತು, ಮಾನಸವಲ್ಮೀಕವನ್ನು ಹೊಕ್ಕರು. ಚಂದ್ರಲೋಕ ಯಾತ್ರೆಗೆ ರಾಕೆಟ್ ಒಳಗಣೆಯ ಕೋಶ (Capsule) ಎಷ್ಟು ಅಗತ್ಯವೋ ಕವಿ ಕ್ರತುದರ್ಶನಕ್ಕೆ ಈ ಹೊರ ಹೊದಿಕೆ ಅವಶ್ಯ, ಅನಿವಾರ್ಯವೇ ಆಗಿತ್ತು. ತನ್ನ ಆತ್ಮದ ಸುತ್ತಣ ಅಲೌಕಿಕ ತಪೋನಂದನದಲ್ಲಿ ಏಕಾಕಿಯಾಗಿ ಸಂಚಾರ ಮಾಡಲೆಳಸಿದ ಈ ಕವಿ ತ್ರಿವಿಕ್ರಮನಂತೆ ಮೂಲೋಕವಿಹಾರಿಯಾದ, ವ್ಯಾಸ

ವಾಲ್ಮೀಕಿಯರ, ಡಾಂಟೆ ಹೋಮರರ ಜೀವಸಖನಾಗಿ ಪುರಾತನದಿಂದ ನೂತನಕ್ಕೆ ಮತ್ತೆ ನೂತನದಿಂದ ಪುರಾತನಕ್ಕೆ ದೇಶಕಾಲಾತೀತವಾಗಿ ವಿಹರಿಸಬಲ್ಲ, ಅವರೊಡನೆ ವ್ಯವಹರಿಸಬಲ್ಲ ಹೃದಯ ಸಂವಾದ ನಡೆಸಬಲ್ಲ ಪ್ರಜ್ಞಾವಾದಿಯಾದ. ಕಾವ್ಯದರ್ಶನಕ್ಕಾಗಿ ವಿಶ್ವವಿಲೀನತೆಗಾಗಿ ಕಾತರಿಸಿದ ಈ ಕವಿಜೀವ ರಾಮಾಯಣದರ್ಶನದಲ್ಲಿ ಕೃತಕೃತ್ಯವಾಯಿತು. ಆದರೆ ಆ ಬೃಹದ್ದರ್ಶನ ಮಾಡಿಸಿದ – ಮಾಡಿದ ಕಣ್ಣೇ ಮತ್ತೆ ಮಲೆನಾಡಿನ ಕೊಳೆಮಣ್ಣಿಗೆ ತಿರುಗಿ, ಅಲ್ಲಿನ ಮಣ್ಣಿನ ಮಕ್ಕಳ ಜೀತದ ಬಾಳುವೆಯ ವಿಶ್ವವಿಸ್ತಾರವಾದ ಸತ್ಯದರ್ಶನವನ್ನು, ವಾಸ್ತವದ ಭೂಮತ್ವವನ್ನು ಪ್ರತಿನಿಧಿಸುವಂತೆ ನೂರ್ಬಗೆಯ ಮನುಷ್ಯ ಜೀವನದ ಸುಖದುಃಖ, ಕಷ್ಟಕಾರ್ಪಣ್ಯ, ಠಕ್ಕುಠವುಳಿಗಳನ್ನು ಎಳೆಎಳೆಯಾಗಿ ರೇಖಾಚಿತ್ರ ಬರೆವಂತೆ ಬರೆಯಿತು. ಡಾಸ್ಟೋವಸ್ಕಿಯ ಕರಮಚೋವ ಬಂಧುಗಳು, ಟಾಲ್ಸ ಟಾಯ ಯುದ್ಧ ಮತ್ತು ಶಾಂತಿ, ಇತಾಲಿಯನ್ ತೈಲಚಿತ್ರಕಾರ ತಿಂತೋರೆತ್ತೋನ 'ಸ್ವರ್ಗ ಮತ್ತು ನರಕ' ನೋಡಿದಾಗ ಉಂಟಾಗುವ ಸಾಂದ್ರರುಂದ್ರ ರಸಾನುಭವವನ್ನುಂಟುಮಾಡುವ ಈ ಮಹಾಕಾದಂಬರಿ ಕುವೆಂಪು ಅವರ ರಾಮಾಯಣದಷ್ಟೆ ಮಹತ್ತ್ವದ ಸಿದ್ಧಕೃತಿ ಎಂದು ನನಗನಿಸುತ್ತದೆ.

'ಶ್ರೀಸಾಮಾನ್ಯ' – ಈ ಪದವೇ ಕುವೆಂಪು ಅವರು ಕನ್ನಡ ಭಾಷೆಗೆ ಸೇರಿಸಿದ ಸಂಪತ್ತು. ಆಧುನಿಕ ಯುಗದ ಬಳಕೆಗನುವಾಗುವ ಈ ಶಬ್ದದಲ್ಲಿ ಬೋರೇಗೌಡನ ಸಂಸ್ಕೃತಕರಣವಾಗಿದೆ, ಉನ್ನಯನವೂ ಆಗಿದೆ. ಶ್ರೀಸಾಮಾನ್ಯನ ದೃಷ್ಟಿಯಿಂದ ನಾವು ಶಿಕ್ಷಣದ ಒಂದು ಮಹತ್ತರವಾದ ಪ್ರಶ್ನೆಯನ್ನು ಬಗೆಹರಿಸಬೇಕೆನ್ನುತ್ತಾರೆ ಕುವೆಂಪು. ಅದೇ ಮಾಧ್ಯಮದ ಪ್ರಶ್ನೆ. ನೂರಕ್ಕೊಬ್ಬನಿಗೆ ಇಂಗ್ಲಿಷ್ ಜ್ಞಾನದ ಅಗತ್ಯ ಬೀಳಬಹುದು. ಉಳಿದ ೯೯ ಶ್ರೀಸಾಮಾನ್ಯನಿಗೆ ಕನ್ನಡವೇ ಸಾಕು. ಪರಿಸ್ಥಿತಿ ಹೀಗಿರುವಾಗ ಸಿಂದಬಾದ ನಾವಿಕನ

ಹೆಗಲೇರಿದ ಮುದುಕನಂತೆ ಇಂಗ್ಲಿಷ್ ಮೆರೆದಾಡಬೇಕಾದ ಕಾರಣ ವಿಲ್ಲ. ಆ ಹೊರೆ ಇಳಿಸಿದರೆ ಶಿಕ್ಷಣ ಸುಸಂಪನ್ನವಾಗುತ್ತದೆ. ಬಲಾತ್ಕಾರದ ಇಂಗ್ಲಿಷ್ ತೊಲಗಬೇಕು ಎಂದು ಕುವೆಂಪು ಗಾಂಧೀಜಿ **Quit India** ಎಂದಷ್ಟೇ ಆಸ್ಥೆಯಿಂದ ನುಡಿಯು ತ್ತಾರೆ. ಪ್ರಪಂಚದ ಸಮಗ್ರ ವೈಜ್ಞಾನಿಕ ವಿಷಯಗಳನ್ನು ಕನ್ನಡ ದಲ್ಲಿ ಹೇಳಲು ಸಾಧ್ಯವುಂಟೆಂದು ಮೂಲಭೂತವಾದ ವಿಶ್ವಾಸವುಳ್ಳ ಕುವೆಂಪು ಈಚೆಗೆ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪ್ರಕಟವಾದ ವಿಶ್ವಕೋಶದ ಎರಡು ಸಂಪುಟಗಳನ್ನು, ಇತರ ವೈಜ್ಞಾನಿಕ ಗ್ರಂಥ ಗಳನ್ನು ಉದಾಹರಿಸುತ್ತಾರೆ. ಶಿವರಾಮ ಕಾರಂತರು ಈ ದಿಶೆ ಯಲ್ಲಿ ಮಾಡಿದ ಅದ್ಭುತ ಸಾಧನೆಯನ್ನು ಅವರು ಮೆಚ್ಚಿಕೊಂಡಿ ದ್ದಾರೆ. ಬಯಕೆ ಇದ್ದರೆ ಬಾಗಿಲು ತರೆದೇ ತೆರೆಯುತ್ತದೆ. ಕನ್ನಡಿ ಗರಿಗೆ ಕನ್ನಡದ ದೀಕ್ಷೆ ಕೊಡಬೇಕು, ನಮ್ಮ ಶಿಕ್ಷಣ. ಆಡಳಿತ ನಮ್ಮ ನಿತ್ಯದ ಜನಜೀವನದಂತೆ ಶ್ರೀಸಾಮಾನ್ಯನಿಗೆ ಅರ್ಥವಾಗುವ ಭಾಷೆಯಲ್ಲಿಯೇ ನಡೆಯಬೇಕು. ಇದರರ್ಥ ಕನ್ನಡವನ್ನು ವಿಷಯ ಬೋಧಕ ಮಾಧ್ಯಮವಾಗಿ ಸ್ವೀಕರಿಸಿದ ತಕ್ಷಣ ಇಂಗ್ಲೀಷನ್ನು ಹೊರದಬ್ಬಬೇಕೆಂದೇನೂ ಇಲ್ಲ. ಇಂಗ್ಲಿಷ್ ಕಲಿಯುವ ಕೆಲ ಮಂದಿ (೧%) ಅದನ್ನೆ ಈಗಿರುವುದಕ್ಕಿಂತ ಸರಿಯಾಗಿ ಓದುವಂತೆ, ಆಡು ವಂತೆ, ಬರೆಯುವಂತೆ, ಹೊಸ ರೀತಿಯಲ್ಲಿ, ದಾರಿಯಲ್ಲಿ ಕಲಿತು ಕೊಳ್ಳಲಿ. ನಮ್ಮ ರಾಷ್ಟ್ರೀಯ, ಅಂತಾರಾಷ್ಟ್ರೀಯ ಕೆಲಸ ಬೊಗಸೆ ಗಳಲ್ಲಿ ತತ್ಪರರಾಗಲಿ. ಉಳಿದವರಿಗೇಕೆ ಇಂಗ್ಲಿಷ್ ಸಾಹಿತ್ಯದ ಒಜ್ಜೆ? ಎರಡೂವರೆ ಕೋಟಿ ಸಂಖ್ಯೆಯುಳ್ಳ ಕನ್ನಡ ಜನಪದಕ್ಕೆ ಎಲ್ಲ ಮಟ್ಟಗಳಲ್ಲಿಯೂ ಕನ್ನಡವನ್ನೇ ಮಾಧ್ಯಮವಾಗಿ ಬಳಸುವ ಸ್ವಾಭಿಮಾನ ಇನ್ನೂ ಮೂಡಿಲ್ಲವೆಂದು ಕುವೆಂಪು ಕೊರಗುತ್ತಾರೆ. ನಮ್ಮ ನಾಡವರಿಗೇ ಕನ್ನಡ ಮಾಧ್ಯಮವು ಬಲಾತ್ಕಾರದಂತೆ ಕಾಣುವುದು ದುರ್ದೈವ. ಆರೋಗ್ಯವರ್ಧಕವಾದ ಔಷಧಿಯ

ನ್ನೊಲ್ಲದ ರೋಗಿಯಂತೆ, ತಾಯ ಮೊಲೆಹಾಲನೊಲ್ಲದ ಹಠ ಮಾರಿ ಕೂಸಿನಂತೆ, ಕೆಲವು ಕಲಿತ ಬುದ್ಧಿವಂತರ ವಿರೋಧವನ್ನು ಮಾಧ್ಯಮ ಇದಿರಿಸಬೇಕಾಗುತ್ತದೆ. ಸ್ವಲ್ಪ ಕಾಲ ಈ ವಿಷಯ ದಲ್ಲಿಯೂ ಬಲಾತ್ಕಾರ ಮಾಡದೆ ಎಲ್ಲರ ಮನವೊಲಿಸಿಕೊಂಡು ಕಾರ್ಯಸಾಧನೆ ಮಾಡಬಹುದೆಂದು ಕುವೆಂಪು ನಂಬಿದ್ದಾರೆ.

ಎಲ್ಲ ಕನ್ನಡ ಸಾಹಿತಿಗಳಂತೆ ಕುವೆಂಪು ಅವರೂ ಇಂಗ್ಲಿಷ್ ದ್ವಾರ ದಿಂದಲೇ ಕನ್ನಡ ಲೋಕದ ಮಂಗಳ ಅಂಗಳಕ್ಕೆ ಕಾಲಿರಿಸಿದರು. ತಂದೆಯನ್ನು ಕಳಕೊಂಡು ಲೋಯರ್ ಸೆಕೆಂಡರಿ ಮುಗಿಸಿ ಮೈಸೂರಿಗೆ ಅಭ್ಯಾಸಕ್ಕೆಂದು ೧೯೧೯ಕ್ಕೆ ಆಗಮಿಸಿದ ಕುವೆಂಪುಗೆ ತಮ್ಮ ಪಠ್ಯಪುಸ್ತಕದ ಸ್ವಿಷ್ಟನಕ್ರೂಸೋಪಾಠ 'ಮರಳಿನಲ್ಲಿ ಹೆಜ್ಜೆ ಗಳು' ( Footprints on the sand ) ಒಂದು ಅದ್ಭುತ ಲೋಕದ ಪರಿಚಯ ಮಾಡಿಕೊಟ್ಟಿತು. ಸ್ವಾಧ್ಯಾಯಚತುರನಾದ ಈ ತರುಣ ಮೈಸೂರಿನ ಸಾರ್ವಜನಿಕ ಲೈಬ್ರರಿಯಲ್ಲಿ ಕ್ರೂಸೋ ಹೆಜ್ಜೆಯ ಜಾಡಿನಲ್ಲೆ ನಡೆದು, ಇಂಗ್ಲಿಷ್ ಸಾಹಿತ್ಯದಲ್ಲಿ ಮೆಲ್ಲ ಮೆಲ್ಲನೆ ಪರಿಣತಿ ಪಡೆದು, ಕವಿತ ರಚಿಸಿ ಜೇಮ್ಸ್ ಕಸಿನ್ಸ್ ಅವ ರಿಗೆ ತೋರಿಸಿದಾಗ ಆತಗೆ ಮೊತ್ತಮೊದಲು ಬೋಧಿ ಕಾದಿತ್ತು. 'ನಿಮ್ಮ ಭಾಷೆಯಲ್ಲಿ ಏಕೆ ಬರೆಯಬಾರದು ?' ಎಂದು ಕಸಿನ್ಸ್ ಕೇಳಿದಾಕ್ಷಣದಿಂದ ಕುವೆಂಪು ಕನ್ನಡಕ್ಕೆ ತಿರುಗಿದರು. ಎಳವೆಯಿಂದಲೆ ಅಭ್ಯಾಸಕುಶಲಿ, ಪುಸ್ತಕಪ್ರೇಮಿ ಪುಟ್ಟಪ್ಪನವರಿಗೆ ಸಾರ್ವಜನಿಕ ವಾಚನಾಲಯದಲ್ಲಿ ಇಂಗ್ಲಿಷ್ ಸಾಹಿತ್ಯದ ಪಕ್ಕದಲ್ಲಿಯೆ ಭಾರತೀಯ ಅಧ್ಯಾತ್ಮದ ಒಂದು ಕೊಪ್ಪರಿಗೆ ದೊರೆಯಿತು – ಸ್ವಾಮಿ ವಿವೇಕಾ ನಂದರ ಕೃತಿ. ನಿರುದ್ದಿಶ್ಯವಾಗಿ ಮೈಸೂರಿಗೆ ಎಲ್ಲರಂತೆ ಡಿಗ್ರಿ ಸಂಪಾ ದನೆಗಾಗಿ ಬಂದ ಹಳ್ಳಿಯ ಹುಡುಗ ಕನ್ನಡದ ಮಹಾಕವಿಯಾಗಿ, ಜ್ಞಾನಪೀಠದ ಕವಿಯಾಗಿ, ರಾಷ್ಟ್ರಕವಿಯಾಗಿ ಮಾರ್ಪಾಟು ಹೊಂದಿದ ಮೊದಲ ದೀಕ್ಷೆ ತನಗೆ ತಾನೇ ಕೊಟ್ಟುಕೊಂಡ. ಇಂಗ್ಲಿಷ್

ಸಾಹಿತ್ಯ ಮತ್ತು ಭಾರತೀಯ ಅಧ್ಯಾತ್ಮದ ಎರಡು ವಿಭಿನ್ನ ಅಚ್ಛೋದ ಸರಸ್ಸುಗಳಲ್ಲಿ ಮನದಣಿಯೆ ಮಿಂದು ಎಂ.ಎ. ಪದವಿ ಪಡೆವಷ್ಟಕ್ಕೆ ಸ್ನಾತಕನೇ ಆಗಿದ್ದ. ಕಾಜಾಣನಂತೆ ಕಾಡಿನ ನಿಸರ್ಗಶೋಭಿತ ನಿರಾಭರಣಸುಂದರ ಕುಕಿಲನ್ನು ಕೊಳಲು, ನವಿಲು, ಕೋಗಿಲೆ ಮುಂತಾದ ಕೃತಿಗಳಲ್ಲಿ ಭಾವೋನ್ಮತ್ತತೆಯಿಂದ ನುಡಿಸಿದ ಕವಿ 'ಅಗ್ನಿಹಂಸ'.

ಅಧ್ಯಾತ್ಮ ಭೂಯಿಷ್ಠ ಕೃತಿರತ್ನಗಳನ್ನು ತನ್ನ ಜೀವಕುಹರದಿಂದ ಅಗೆದು ಕಟ್ಟಕೊನೆಗೆ ರಾಮಾಯಣದರ್ಶನದಲ್ಲಿ ಪೂರ್ಣದೃಷ್ಟಿಯ ಒಂದು ಮಹಾಕಾವ್ಯವನ್ನೊದವಿಸಿದ್ದಾರೆ. ಜತೆಜತೆಗೆ ತನ್ನ ಕಾವ್ಯ ಸೃಷ್ಟಿಗೆ ಸಮಾನಾಂತರದಲ್ಲಿ ಬೇಕುಬೇಕಾದ ವಿಮರ್ಶನಶಾಸ್ತ್ರವನ್ನು ಬೆಳೆಸಿಕೊಂಡಿದ್ದಾರೆ. ಪ್ರತಿಮಾ ಸೃಷ್ಟಿ, ಪೂರ್ಣದೃಷ್ಟಿ, ಮಹೋಪಮೆ ಮುಂತಾದುವು ಕನ್ನಡದ ಇಂದಿನ – ಹಿಂದಿನ – ಮುಂದಿನ ಮಹಾಕಾವ್ಯಗಳನ್ನು ತೂಗಲು ಪ್ರಶಸ್ತ ಕಾವ್ಯ ವಿಮರ್ಶನ ಸೂತ್ರ, ಪದ್ಧತಿ ನಿರ್ಮಾಣ ಮಾಡಿವೆ. ಕುವೆಂಪು ಅವರ ಕಾವ್ಯ ರಚನೆಯಲ್ಲಿ ಮಿಲ್ಟನ್ ಮಹಾಕವಿ ಮತ್ತು ರವೀಂದ್ರನಾಥ ಠಾಕೂರರ ಪ್ರಭಾವ ಎದ್ದು ತೋರುತ್ತಿರುವಂತೆ, ಅವರ ಗದ್ಯದಲ್ಲಿ ಸೇರಿರುವ ಸಂಸ್ಕೃತ ಪದಪುಂಜಗಳಿಗೂ ರವೀಂದ್ರನಾಥರೇ ಕಾರಣ. ಆದರೆ ಅವರು ಪದಗಳನ್ನು ಟಂಕಿಸುವಾಗ ಅತಿ ಜಾಗರೂಕರಾಗಿರುತ್ತಾರೆ, ವಿಷಯಕ್ಕೆ ಸಮುಚಿತವಾದ ಪದಬಂಧವನ್ನು ಕವಿತೆಯಂತೆ ಗದ್ಯದಲ್ಲೂ ಸೃಷ್ಟಿಸುತ್ತಾರೆ. ಶ್ರೀಸಾಮಾನ್ಯನ ಬದುಕಿನ ಮಹಾದರ್ಶನ ಮಾಡಿಸುವ ಅವರ ಇತ್ತೀಚೆಗಿನ 'ಮಲೆಗಳಲ್ಲಿ ಮದುಮಗಳು' ಅವರ ಪರಿಪಕ್ವವಾದ ಇನ್ನೊಂದು ಮೇರುಕೃತಿ; ಇದರಲ್ಲಿ ಅವರು ಸೋಲಿಸಿರುವುದು ಅವರ ಕಾನೂರು ಹೆಗ್ಗಡಿತಿಯನ್ನೇ. ಅಲ್ಲಿನ ಭಾವಾತಿರೇಕ ಇಲ್ಲಿಲ್ಲ, ಕವಿ ಸ್ಥಿತಪ್ರಜ್ಞನಾಗಿ ಸಮದೃಷ್ಟಿಯಿಂದ ಮಲೆನಾಡಿನ ಜೀವನದ ಬಹಿರಂತರ್ಲೋಕಗಳಲ್ಲಿ ಸಂಚರಿಸಿದ್ದಾರೆ.

ಮಲೆನಾಡೇನು, ಕನ್ನಾಡೇನು, ಇದೀಗ ಕವಿ ಕಾವ್ಯದಲ್ಲೊ, ಗದ್ಯ ದಲ್ಲೊ ತ್ರಿಭುವನಸಂಚಾರಿ, ವಿಧವಿಧ ಪ್ರಜ್ಞಾಸ್ತರಗಳ ಸ್ವಚ್ಛಂದ ವಿಹಾರಿ.

ಕನ್ನಡ ಕಟ್ಟಿದ ನಿಮಗೆ ರಾಜ್ಯೋದಯದ ಬಳಿಕ ನಿಮ್ಮ ಕನಸಿನ ರಾಜ್ಯ ಹುಟ್ಟಿದಂತೆ ಅನಿಸಿದೆಯೆ? ಎಂದು ಕೇಳಿದಾಗ ಕುವೆಂಪು ಅಂಥ ಉದ್ವಿಗ್ನತೆ ತೋರಲಿಲ್ಲ. ಸಮಾಧಾನಪೂರ್ವಕ ಅವರು ಉತ್ತರ ನೀಡಿದರು. 'ನಮ್ಮ ಕನಸಿನ ಕನ್ನಡ ರಾಜ್ಯ ಸಾಹಿತ್ಯ ಪ್ರಪಂಚಕ್ಕೆ ಸೀಮಿತವಾದದ್ದು; ಇಂದಿನ ಹೋರಾಟ ನಡೆದಿರು ವುದು ರಾಜಕೀಯ ಪ್ರಪಂಚದಲ್ಲಿ. ಇಲ್ಲಿ ಕ್ಷುದ್ರ, ನೀಚ ಜನಗಳದೇ ಕಾರುಭಾರು ನಡೆದಿದೆ. ಕನ್ನಡಮಾತೆಯನ್ನು ತುಂಡರಿಸುವುದಕ್ಕೂ ಹೇಸದ ಈ ಜನ ಒಡ್ಡುವ ಕಾರಣಗಳೆಲ್ಲ ವಿಘಾತಕ. ಎರಡಾದ ಮೇಲೂ ನೂರೆರಡಾಗುವ ವರೆಗೆ ಅಲ್ಪ ಕಾರಣಗಳಿಗಾಗಿ ಇವರು ಜಗಳ ಹಚ್ಚುವವರೇ. ಆದ್ದರಿಂದ ಎರಡಾದರೂ ಜಗಳ ನಿಲ್ಲದಾಗಿ ಒಂದಾಗಿರುವುದೇ ಲೇಸು. ಸಾಹಿತಿಗಳಲ್ಲಿ ಈಗ ಹೆಚ್ಚು ಐಕ್ಯ ಮತವುಂಟು. ಅದ್ದರಿಂದ ಕನ್ನಡ ರಾಜ್ಯದ ಪತನವೇನೂ ಆಗಿಲ್ಲ. ಪ್ರಸ್ತುತ ರಾಜ್ಯದ ಸಚಿವ ಸಂಪುಟದ ದೂರದರ್ಶಿ ಕನ್ನಡ ಧೋರಣೆ ಯನ್ನು ಕುವೆಂಪು ಮೆಚ್ಚಿಕೊಂಡಿದ್ದಾರೆ. ಮುಂಬರುವ ಯುವ ಜನಾಂಗದ ರಾಜಕೀಯಸ್ಥರು ಕನ್ನಡದ ಕೆಲಸವನ್ನು ಇನ್ನಷ್ಟು ಆಸಕ್ತಿಯಿಂದ ನಡೆಸಿಕೊಡುತ್ತಾರೆಂಬ ಭರವಸೆಯನ್ನು ಈಗಿನ ವರು ಮೂಡಿಸಿದ್ದಾರೆ. ಕನ್ನಡ ಭಾಷೆ ಸಾಹಿತ್ಯ ಮತ್ತು ರಾಜ್ಯಗಳ ಬಗ್ಗೆ ಮಹಾಕವಿ ತುಂಬ ಆಶಾವಾದಿಗಳಾಗಿದ್ದಾರೆ.

## ಉಳಿಯುವ ಮಾತು

ಕವಿ ಇತರ ಎಲ್ಲ ವಿಭೂತಿಗಳಿಗೂ ಪ್ರಣಾಳಿಕಾ ರೂಪವಾಗಿ ಆವಿರ್ಭವಿಸುವ ವಿಭೂತಿ. ಸರ್ವಚೇತನಗಳ ಸಮಷ್ಟಿ ಚೇತನ

ರೂಪನಾಗಿ ಸರ್ವದೇವತಾ ಶಕ್ತಿಗಳ ಸಮಷ್ಟಿ ದೇವತಾ ಶಕ್ತಿ ರೂಪನಾಗಿ ಆವಿರ್ಭವಿಸುವ ಮಹಾಕವಿ ಇತರ ಎಲ್ಲ ವಿಭೂತಿಗಳಿಗೂ ಪ್ರಣಾಳಿಕಾ ರೂಪದಲ್ಲಿ ಅವತರಿಸುವ ಲೋಕಮೋಹಕ ವಿಭೂತಿ.

೦೦ ೦೦ ೦೦

ನಮ್ಮ ಕನ್ನಡ ನಾಡಿಗೆ ದೇವರು ಸಹ್ಯಾದ್ರಿಯನ್ನು ದಯಪಾಲಿಸಿದ್ದಾನೆ. ಪಶ್ಚಿಮ ಸಮುದ್ರದ ಸಂಗ ಸಾನ್ನಿಧ್ಯಗಳನ್ನು ಕೃಪೆ ಮಾಡಿದ್ದಾನೆ. ಜೊತೆಗೆ ಅವೆಲ್ಲಕ್ಕೂ ಹೆಗಲೆಣೆಯಾಗಿ ನಿಂತರೂ ನಮಗೆ ಒಡನಾಡಿಗಳಾಗಿರುವಂತೆ ಪಂಪ ನಾರಣಪ್ಪರನ್ನೂ ಅನುಗ್ರಹಿಸಿದ್ದಾನೆ. ಅವರ ಬೆಲೆಯರಿತು ನಾಡಿನ ಬಾಳು ಅರಳಲಿ.

೦೦ ೦೦ ೦೦

ಬಸವಣ್ಣನವರು ನಮ್ಮ ಮನೆಯ ಗುಡಿಯ ದೇವರಡಿಯ ತಣ್ಣೊಡರು. ನಮ್ಮ ಕತ್ತಲೆಯನ್ನು ಬೆಳಗಲು ಸಾಕು ಆ ಪ್ರದೀಪ. ಅದರ ಪುಣ್ಯ ಜ್ಯೋತಿಗೆ ಕೈ ಮುಗಿದು ಧನ್ಯರಾಗುವವರು ಮತ್ತೊಂದಕ್ಕೆ ಖಂಡಿತ ಕರುಬಬೇಕಾಗಿಲ್ಲ. ಏಕೆಂದರೆ ಎಲ್ಲೆಲ್ಲಿಯೂ ಇರುವಂತೆ ಇಲ್ಲಿಯೂ ಇರುವುದಿಲ್ಲ. ಅನಂತವು ಪೂರ್ಣದಲ್ಲಿ ಎಂತೋ ಅಂತೆ ಅಂಶದಲ್ಲಿಯೂ ಪೂರ್ಣವಾಗಿಯೆ ಅನಂತ.

೦೦ ೦೦ ೦೦

ನಿಜವಾದ ಶಾಂತಿಗೆ ಮುನ್ನ ಮನುಷ್ಯತ್ವ ಶಮವನ್ನು ಸಾಧಿಸಬೇಕಾಗುತ್ತವೆ. ಶಮವಿಲ್ಲದ ಶಾಂತಿ ಬರಿಯ ಭ್ರಾಂತಿ. ವ್ಯಷ್ಟಿ ವ್ಯಷ್ಟಿ ಸೇರಿ ಸಮಷ್ಟಿಯಾಗಿದೆ......ದೇಶಭಕ್ತಿ, ರಾಷ್ಟ್ರೀಯತೆ, ಸ್ವಮತ, ಸ್ವಸಂಸ್ಕೃತಿ, ಸ್ವಭಾಷಾಭಿಮಾನಗಳೆಲ್ಲ ಅಹಂಕಾರ ಮೂಲವಾದ ವ್ಯಷ್ಟಿ ಪ್ರತಿಷ್ಠೆಯ ಸಮಷ್ಟಿರೂಪಗಳಲ್ಲದೆ ಮತ್ತೇನು? ಆದ್ದರಿಂದ ವ್ಯಷ್ಟಿ ವ್ಯಷ್ಟಿಗಳಲ್ಲಿ ಅಂತಹ ಶಮ ಸಾಧನೆಯಿಂದ ಮೂಡುವ ಮೂಲ ಪರಿವರ್ತನೆಗಾಗಿ ನಾವು ಸಾಮೂಹಿಕವಾಗಿ

ಕಾರ್ಯೋನ್ಮುಖವಾಗದಿದ್ದರೆ ಬರಿಯ ಅರ್ಥಶಾಸ್ತ್ರದ ಅಥವಾ ರಾಜಕೀಯ ಶಾಸ್ತ್ರದ ತೇಪೆ ಹಾಕುವ ಕುಶಲ ಕರ್ಮದಿಂದ ಎಂದಿಗೂ ಸರ್ವರೂ ಅಪೇಕ್ಷಿಸುವ ಸಮಷ್ಟಿ ಶಾಂತಿ ಸಿದ್ಧಿಸುವುದಿಲ್ಲ. ಸ್ವಭಾವ ಬದಲಾಯಿಸದೆ ಬದುಕು ಬದಲಾಯಿಸುವುದಿಲ್ಲ.

೦೦ ೦೦ ೦೦

ಯುಗಚಕ್ರವ ಮುನ್ನೂಂಕಲು ಇದೆ ಗುರುದೇವನ ಶಕ್ತಿ
ನಮಗಿಂದಿಗೆ ಬೇಕಾದುದು ಉದ್ಧಾರದ ಆಸಕ್ತಿ
ಮತಿವಂತನೆ ಓ, ಮಾನವ, ಕಟಿಬಂಧನ ಗೈ, ನಿಲ್ಲು:
ಯುಗದೊಳ್ಪಿಗೆ, ಜಗದೊಳ್ಪಿಗೆ, ನಿನ್ನೊಳ್ಪನೆ ನೀಂ ಗೆಲ್ಲು!

(ವಿಭೂತಿಪೂಜೆ)

ಕವಿಪ್ರತಿಭೆಯ ರಸಕ್ರಿಯೆ ಲೌಕಿಕ ನಶ್ವರಕ್ಕೆ ಅಮೃತತ್ವವನ್ನು ದಯಪಾಲಿಸುತ್ತದೆ; ಕಾಲ ದೇಶದ ಮೃತ್ಯುಪಂಜರದಿಂದ ಪಾರು ಮಾಡಿ, ವಿಸ್ಮೃತಿಯ ವೈತರಣಿಯಲ್ಲಿ ಅದನ್ನು ಮುಳುಗಲೀಯದೇ ಉದ್ಧಾರ ಮಾಡುತ್ತದೆ.

೦೦ ೦೦ ೦೦

ಎಲ್ಲಿ ಸೌಂದರ್ಯ ಪರಿಮಿತದಲ್ಲಿ ವಿಹರಿಸುತ್ತದೆಯೋ ಅಲ್ಲಿ ಮೈದೋರುವುದು ಲಾಲಿತ್ಯ. ಎಲ್ಲಿ ಅದು ಅಪರಿಮಿತದಲ್ಲಿ ವಿಜೃಂಭಿಸಿ, ವಿರಾಟ್‌ಸ್ಪರ್ಶಿಯಾಗುತ್ತದೆಯೋ ಅಲ್ಲಿ ಹೊರ ಹೊಮ್ಮುವುದು ಭವ್ಯತೆ. ಅಲ್ಪ ಶಬ್ದಕ್ಕೆ ಯಾವ ಹೀನಾರ್ಥವನ್ನೂ ಆರೋಪಿಸದೆ ಹೇಳುವುದಾದರೆ ಅಲ್ಪತೆ ಲಾಲಿತ್ಯದ ಒಂದು ಲಕ್ಷಣ. ಭೂಮತೆ ಭವ್ಯತೆಯ ಲಕ್ಷಣ.

(ತಪೋನಂದನ)

# ಶಂಬಾ

ಅವೈದಿಕ ವೈದಿಕ, ಶಿಷ್ಯರಿಲ್ಲದ ಆಚಾರ್ಯ, ಕನ್ನಡದ – ಕಂನುಡಿಯ ಪಾತಳಿಯಿಂದ ಬರ್ಟ್ರಂಡ್ ರಸೆಲ್, ಯಾಜ್ಞವಲ್ಕ್ಯರ ಊರ್ಧ್ವಮಾನಸ ಸೀಮೆಗೆ ಹಠಾತ್ತನೆ ನೆಗೆಯಬಲ್ಲ ಗರುಡ ಗಮನದ ಸಾಧಕ, ಸದಾ ಸರ್ವದಾ ಚಿಂತನ–ಮಂಥನ, ಹೆಚ್ಚಾಗಿ ಆತ್ಮ ಮಂಥನ, ಸ್ವಗತ ಪ್ರಶ್ನೋತ್ತರ ಮಾಡುವ ಎಪ್ಪತ್ತರ ಸಂದಿನ ಶಂಬಾ ಸಾಹಿತಿಗಿಂತ ಹೆಚ್ಚಾಗಿ ದಾರ್ಶನಿಕ, ಮುಕ್ತ ವೈಚಾರಿಕ (Free thinker). ದಶಂಬರ ೧೩, ೧೯೭೦ ಸಾಧನಕೇರಿಯಲ್ಲಿ ಗೋ(ಮಹಿಷ)ಧೂಳೀ ಲಗ್ನದಲ್ಲಿ ನಾನು ಅವರನ್ನು ಕಾಣಬಯಸಿ ಅವರ ಮನೆಯಂಗಳವನ್ನು ಹೊಕ್ಕಾಗ ಪೂರ್ವ ಸೂಚನೆ ಇದ್ದ ಶಂಬಾ ದಿಗ್ಗನೆ ತಮ್ಮ ಪಡುಮಂಚದಿಂದೆದ್ದು, ಬಾಗಿಲಲ್ಲೇ ನನ್ನನ್ನು ಕೈಹಿಡಿದು, ಕರೆದೊಯ್ದು, ಕುರ್ಚಿ ನಿಮಗೇ ಎಂದು ನನ್ನನ್ನದ ರೊಳಕ್ಕೆ ಕೂರಿಸಿ, ಇವರು ಕಾಫಿಯೇ ಕುಡಿಯುವವರೆಂದು ಮನೆಯೊಳಗಿನವರಿಗೆ ತಿಳಿಸಿ, ಮತ್ತೆ ತಮ್ಮ ದಿಂಬಿಗೊರಗಿ ಕೂತರು. ಆರೆಂಟು ವರ್ಷಗಳ ಹಿಂದೆ ನೋಡಿದ ಆ ಕಣ್ಣಿನ ಹೊಳಪು ಒಂದಿಷ್ಟೂ ಕುಂದಿರಲಿಲ್ಲ – ಆ ಹೊಳಪು ಶಂಬಾ ಅವರ ಚಿತ್ತ ದೀಧಿತಿಯ ಸಂಕೇತ. ಅದನ್ನು ಅರ್ಥಮಾಡಿಕೊಂಡರೆ, ಅರ್ಥ ಮಾಡಿಕೊಂಡವರಿಗೆ ಪ್ರಾಯಃ ಅದರ ಪ್ರಖರತೆಯನ್ನು ಸಹಿಸುವುದು ಕಠಿನ. ವಿಚಾರಯಜ್ಞದ ಪ್ರಜ್ವಲಿತ ಶಿಖಿಯಿಂದ ನನ್ನಂಥ ನಾಸ್ತಿಕ ಶಾಸ್ತ್ರ (ಅರ್ಥಶಾಸ್ತ್ರ) ಪಂಡಿತ ಏನು ಪಡೆದಾನು? ನಾನು ಶಂಬಾ ಅವರಿಗೆ ಎರಡೇ ಎರಡು ಮೀಟರ್ ದೂರದಲ್ಲಿ

ಆಸೀನರಾಗಿದ್ದರೂ ನಮ್ಮ ಮಾನಸ ಭೂಮಿಕೆಯಲ್ಲಿ ಯೋಜನ ಅಂತರವಿತ್ತು. ಇದನ್ನೇ ನಮ್ಮ ಪೂರ್ವಿಕರು 'ತದ್ದೂರೇ ತದ್ವಂತಿಕೇ' ಅಂದಿರಬಹುದೆ?

ವಿಶ್ವವಿದ್ಯಾಲಯಕ್ಕೆ ಕೂಗಳತೆಯಲ್ಲಿರುವ ಈ ವಿಚಾರಪುರುಷ ನನ್ನು ಲಾಲಿಸಲು, ಆಲಿಸಲು, ಅಲ್ಲಿನ ಪಂಡಿತಂ ಮನ್ಯರು, ನೈವೇದ್ಯಾರ್ಥಿ ವಿದ್ಯಾರ್ಥಿಗಳು ಬರುವುದುಂಟೇ? ಎಂದು ಕೇಳಿದರೆ "ಅವರಿಗೆ ನಾನಿಲ್ಲಿರುವುದೇ ಗೊತ್ತಿಲ್ಲ. ನೋಡಿ ನೀವು ಬಂದಿರಿ, ಮೊನ್ನೆ ನಿಮ್ಮ ಜವರೇ ಗೌಡರು ಬಂದು ಪ್ರೀತಿಯ, ವಿಶ್ವಾಸದ ನಾಲ್ಕು ಮಾತಾಡಿ ಹೋದರು. ಹೀಗೆ ಎಲ್ಲಾದರೂ ದೂರದಿಂದ ಜನ ಬರಬೇಕು. ಹಾಗೆ ಎಲ್ಲರೂ ಬರಲಿಕ್ಕೆ ನನ್ನ ಹತ್ತಿರ ಅವರಿಗೆ ಕೊಡಲಿಕ್ಕೇನಿದೆ?" ಎಂಬರ್ಥದ ಮಾತು ಶಂಬಾ ಕಡೆಯಿಂದ ಬಂತು. ಈ ಮಾತಿನಲ್ಲಿ ಟೀಕೆಯ ಸುಳಿವಿರಲಿಲ್ಲ. ಯಥಾರ್ಥ ಜ್ಞಾನದ ಹೊಳಪಿತ್ತು. ಮೇಜಿನ ಮೇಲಿನ 'ನಾಗಪ್ರತಿಮೆ' ಗ್ರಂಥದ ಪ್ರಕಟಣೆಯ ಕಥಾಮುಖದಿಂದ ನಮ್ಮ ಸಂಭಾಷಣೆ–ಸಂಭಾಷಣೆಯೆಲ್ಲಿ ಬಂತು – ಶಂಬಾ ಪ್ರವಚನ ತೊಡಗಿತು. 'ಸೂರ್ಯನ ಹತ್ತಿರ ಸರ್ಪ ಇದೆ' ಎಂಬ ಋಗ್ವೇದದ ಋಕ್ಕಿನಿಂದ ಪ್ರಚೋದಿತವಾದ ಸಂಶೋಧನ ಗಹನವಾಗುತ್ತ, ವಿಸ್ತಾರವಾಗುತ್ತ ೬೦೦ ಪುಟಗಳ ಹೆಬ್ಬೊತ್ತಿಗೆಯ ಹಸ್ತಪ್ರತಿಯಾಗಿ ಬೆಳೆದಾಗ, ಎಪ್ಪತ್ತರ ಇಳಿವಯಸ್ಸಿನಲ್ಲಿ ಪ್ರಕಟಣೆಯ ಆರ್ಥಿಕ ಭಾರವನ್ನು ಹೊರಲಾರದ ಈ ಸಂಶೋಧಕ ಕಾರಂತರ ಮರೆಹೊಕ್ಕರಂತೆ. ಮರುಟಪಾಲಿಗೇ ಕಾರಂತರು ೫೦೦ ರೂಪಾಯಿ ಕಳಿಸಿ ಇನ್ನೊಂದು ಐನೂರು 'ಹಿಂದಾಗಡೆ' ಕಳಿಸುತ್ತೇನೆ ಅಂದರಂತೆ. ದೀರ್ಘ ಕಾಲದ ಪೂರ್ವ ಸಖ್ಯವುಳ್ಳ ಇವರು ಸ್ನೇಹಿತನ ದಾನವನ್ನೊಲ್ಲದೆ ನಿಮಗೆ ಗೊತ್ತಿರುವ ಸಂಸ್ಥೆಗಳ ನೆರವು ತೆಗೆಸಿಕೊಡಿರೆಂದು ಬಿನ್ನವಿಸಿಕೊಂಡರಂತೆ. ಕಾರಂತರು ಮೈಸೂರು ವಿಶ್ವವಿದ್ಯಾಲಯಕ್ಕೆ ಬರೆಯುತ್ತೇನೆ

ಎಂದಾಗ ಶಂಬಾಗೆ ಶಂಕೆ. ಈ ಅಸಾಂಪ್ರದಾಯಿಕ ಕೃತಿಗೆ ಮೈಸೂರು ಮನ್ನಣೆ ಕೊಟ್ಟೀತೇ ಎಂಬ ಭೀತಿ. ಕೆಲಕಾಲದಲ್ಲಿ ಪ್ರಸಾರಾಂಗದ ಒಪ್ಪಿಗೆ ದೊರೆತಾಗ ಪ್ರೀತಿ, ಕುಲಪತಿ ಗೌಡರ ಔದಾರ್ಯಕ್ಕೆ ಅಚ್ಚರಿ. ಮುನ್ನುಡಿಯೂ ಇಷ್ಟರಲ್ಲಿ ಅಚ್ಚಾಗಿ ಬಂದಿತ್ತು. ಇದರಲ್ಲಿ ಶಂಬಾ ತಮ್ಮ ಮೌಲಿಕ ವಿಶ್ಲೇಷಣೆ, ಒಂದು ಹೊಸ ವೈಜ್ಞಾನಿಕ ಕ್ರಮ, ಸಂಶೋಧಕರಿಗೆ ಮಾರ್ಗದರ್ಶನ ಮಾಡಬಲ್ಲ ಯಾವ ವೈದಿಕ ಸಾಹಿತ್ಯಕ್ಕೂ ಅನ್ವಯಿಸಬಹುದಾದ, ತಾತ್ವಿಕ ವಿಮರ್ಶನ ಪದ್ಧತಿಯನ್ನು ಒದಗಿಸಿದ್ದಾರೆ. ವೈದಿಕ ಸಾಹಿತ್ಯ ಸಂಸ್ಕೃತಿ ಬಂಡಾರದ ಮುದ್ರೆಯನ್ನೊಡೆಯುವ ಸಮಿತಿ, ಸಮಯ, ಪ್ರತಿಮೆ, ಎಂಬ ತ್ರಿ-ಸೂತ್ರಗಳನ್ನು ಆವಿಷ್ಕಾರ ಮಾಡಿದ್ದಾರೆ.

ಯಾವ ಸಂಸ್ಕೃತಿಯೂ ಪ್ರತಿಮೆಗಳಿಲ್ಲದೆ ಬೆಳೆಯಲಾರದು. ಈ ಮೊದಲ ತಾರ್ಕಿಕ ಪ್ರತಿಮೆಗಳಲ್ಲಿ Logical forms of thought ತಮ್ಮ ವಿಲಕ್ಷಣ ಸಂಶೋಧನ ಪದ್ಧತಿಯಲ್ಲಿ ಬಳಸಿಕೊಂಡ ಶಂಬಾಗೆ, ಈಗ ಅದು ಸಾಲದಾಗಿದೆ. ಶಾಬ್ದಿಕ ಪ್ರತಿಮೆ ಎಂಬ ಒಂದು ಹೊಸದನ್ನು ಕಂಡರಿಸಿ ಅವರು ನಾಗ ಪ್ರತಿಮೆಯಲ್ಲಿ ಹೂಡಿದ್ದಾರೆ. ಯಾವ ತತ್ವವಾದರೂ ಬುದ್ಧಿಯೋ ವಿಚಾರವೋ, ಮಾನಸಿಕ ಪ್ರಪಂಚದ ಅಂಗಾಂಶಗಳೋ, ಆವಿರ್ಭವಿಸಬೇಕಾದರೆ ಅವು ಶಬ್ದ ರೂಪದಲ್ಲಿ ಮೂರ್ತೀಭವಿಸಬೇಕು. 'ವಾಗಾರ್ಥವಿವಸಂಪೃಕ್ತೌ' ವಾಗರ್ಥಪ್ರತಿಪತ್ತಿಯಿಂದ ದರ್ಶನ, ಸಿದ್ಧಿ. ಉದಾ: 'ಇಂದು' ಎಂಬ ಕಾಲ ಸೂಚಿ ಪದ, ಇದರ ಕಲ್ಪನೆ–ಮಕ್ಕಳಿಗೆ ಹೇಗೆ ನಿನ್ನೆ ನಾಳೆಗಳನ್ನು ಬೇರ್ಪಡಿಸಿ ಹೇಳಲು ಬರುವುದಿಲ್ಲವೋ ಹಾಗೆ – ಒಂದು ಶಬ್ದ ಪ್ರತಿಮೆ. ಏಕೆಂದರೆ ಕಾಲ ಅನಸೂತ್ರವಾಗಿ ಹರಿಯುತ್ತಲೇ ಇರುವಾಗ ಇಂದು ಶಬ್ದದ ಕಟ್ಟಿನೊಳಗೆ ಬಂಧಿಸಿರುವ ಬರಿಯ ಕಲ್ಪನೆ ಮಾತ್ರ. ಈ 'ಇಂದು' ನಿರಂತರ ಪ್ರವಹಿಸುವ ಕಾಲದಲ್ಲಿ ಸ್ಥಿತ ಆದರೂ ಅಂತರ್ಗತ, ( incapsulated past ) ಎಂದು

ಇದನ್ನು ಪಾಶ್ಚಾತ್ಯ ವಿದ್ವಾಂಸನೊಬ್ಬನು ಕರೆದಿದ್ದಾನೆ. ಇಂಥ ಭಾಷಾ ಪ್ರತಿಮೆಗಳು ವಿದ್ವಾಂಸರಿಗೆ ಸತ್ಯದ ಖಜಾನೆ ಕೀಲಿಕೈ ದೊರೆತಹಾಗೆ.

ಜಾತವೇದ ಅಗ್ನಿಯನ್ನು ನಚಿಕೇತ ಅಗ್ನಿಯಾಗಿ ಪರಿವರ್ತಿಸಿ ಕುತ್ಸಿತಕರಣ ಮಾಡಿದ 'ಮುನಿ' ಸಂಪ್ರದಾಯಕ್ಕೆ ಶಂಬಾ ಬದ್ಧ ವಿರೋಧಿಗಳು. ಋಷಿ ಸಂಪ್ರದಾಯಗಳನ್ನು ತೊರೆದು ಮುನಿ ಸಂಪ್ರದಾಯಸ್ಥರು ಇಂಥ ಅನೇಕ ಕುಯುಕ್ತಿಗಳನ್ನು, ಸಂದೇಹ ವಾಚಕ 'ವಾ ನವಾ' ಪ್ರಯೋಗಗಳನ್ನು ಸೇರಿಸಿ, ವೈದಿಕ ಜ್ಞಾನಕ್ಕೆ ಹೊಗೆ ಹಿಡಿಸಿರುವುದನ್ನು ಶಂಬಾ ಖಂಡಿಸುತ್ತಾರೆ. ಋಗ್ವೇದದ ಮೂಲ ದೇವತೆಗಳನ್ನು ಮರೆಮಾಡುವ ಈ ಮೂರ್ಖ ಮುನಿ ಪ್ರಯತ್ನಕ್ಕೆ ಶಂಬಾ ರೇಗುತ್ತಾರೆ. ಇದು ಮುನಿ ಮಾರ್ಗದಲ್ಲಿ ನಡೆದ ಪುರಾಣಕಾರರು, ಶ್ರುತಿಕಾರರು ನಡೆಸಿದ ಒಂದು ದೊಡ್ಡ 'ಕೃಷ್ಣ ಕಾರಸ್ಥಾನ' ಎಂದು ಅವರು ವಾದಿಸುತ್ತಾರೆ. ಅಹಲ್ಯಾ ಪ್ರಕರಣದಲ್ಲಿ ಬರುವ ಎರಡು ಪಾಠಾಂತರದ ಕಥೆಗಳು ವೈದಿಕ ಇಂದ್ರನನ್ನು ಹೀನೈಸುವ ಸಲುವಾಗಿ ಯಾವನೋ ಮುನಿಯಿಂದ ಹುಟ್ಟಿಕೊಂಡದ್ದು ಇರಬೇಕು ಎಂದು ಅವರು ವಾದಿಸುತ್ತಾರೆ. ಅಲ್ಲದೆ ಸ್ವೀಡನ್ನಿನ ಪುರಾಣಗಳಲ್ಲಿ ಬರುವ ಒಂದು ಮಹಾ ವೃಕ್ಷ ದಲ್ಲಿಯೂ ಕ್ರೈಸ್ತಪಂಥ ಬೂದಿ ಬುಧವಾರ( Ash Wednesday, Vestal fire ) ಅಂಥ ವಿಧಿಗಳಲ್ಲಿ ನಿಜವಾದ ವೇದ ಸಂಬಂಧಿ ಜಾತವೇದ ಅಗ್ನಿಯ ಸಾಂಸ್ಕೃತಿಕ ಪ್ರತಿರೂಪವನ್ನು ಅವರು ಶೋಧಿಸಿದ್ದಾರೆ. ಶಂಬಾ ವಾದಸರಣಿಯ ಒಂದು ಬಿಂದು ವೈದಿಕ ಮೂಲ ಸಾಹಿತ್ಯದ ಅಧ್ಯಯನ ಮತ್ತು ಅನ್ವೇಷಣ, ಇನ್ನೊಂದು ಬಿಂದು ಮೆಕಡೊನೆಲ್ ಇತ್ಯಾದಿ ಪಾಶ್ಚಾತ್ಯ ವಿದ್ವಾಂಸರ ವೈಜ್ಞಾನಿಕ ವಿಚಾರ ಪದ್ಧತಿ. ಈ ಎರಡನ್ನು ತಮ್ಮ ಹೃದಯದ ಅರ್ಧ ವೃತ್ತದಲ್ಲಿ ಮೈಗೂಡಿಸಿಕೊಂಡ ಶಂಬಾ ವ್ಯಕ್ತಿತ್ವ ಪ್ರಾಚ್ಯ ಮತ್ತು

ಪಾಶ್ಚಾತ್ಯ ಆಲೋಚನೆಗಳ ಒಂದು ಕೂಡಲಸಂಗಮ.

ಇಂಥ ವಿಶಿಷ್ಟ ನಿಜವಾಗಿಯೂ ಅಸಾಮಾನ್ಯ, ವಿದ್ವತ್ತು ಅವರಿಗೆ ದಕ್ಕಲು ಅವರ ಏಕಾಂತ ಸಾಧನೆ ಕಾರಣ. ಅವರ ಪಾಂಡಿತ್ಯದ ಸವಿಯನ್ನು ಕನ್ನಡಿಗರಲ್ಲದೆ ಇತರ ಭಾರತೀಯರೂ ಸವಿಯುವಂತೆ ಏನಾದರೂ ಏರ್ಪಾಡು ಮಾಡಬೇಕೆಂದು ಶಂಬಾಗೆ ಆಶಯವುಂಟು. ಒಬ್ಬೊಬ್ಬರಾದರೂ ತಮ್ಮಂತೆ ಕ್ರಾಂತಿ ಮಾರ್ಗದಲ್ಲಿ ಹೆಜ್ಜೆ ಇಡಬೇಕು ಎಂದು ಅವರಿಗೆ ಅನಿಸುತ್ತಿದೆ. ನಾಲ್ಕು ವಿಶ್ವವಿದ್ಯಾನಿಲಯಗಳಿರುವ ಈ ಕನ್ನಡ ರಾಜ್ಯದಲ್ಲಿ ಅವರು ಕೇವಲ ಒಬ್ಬನೆ ಆಗಿರುವ ಬದಲು ತನ್ನ ಮುಕ್ತ ವೈಚಾರಿಕ ಪದ್ಧತಿಯನ್ನು ಬೆಳೆಸಲು ಒಬ್ಬಿಬ್ಬರನ್ನಾದರೂ ಅಣಿಗೊಳಿಸಬೇಕೆಂದು ಅವರು ತವಕಪಡುತ್ತಿದ್ದಾರೆ. ಈ ಪ್ರಕಾಂಡ ಪಂಡಿತರ ಹೃದಯದ ಕರೆಗೆ ನಮ್ಮ ಉನ್ನತ ಶಿಕ್ಷಣ ವಲಯಗಳಲ್ಲಿ ಪಡಿದನಿ ದೊರತೀತೇ ?

ಅವರ ಇನ್ನೊಂದು ಆಶೆಯನ್ನು ಅವರು ವ್ಯಕ್ತಪಡಿಸಿದರು: ಅದು ಕನ್ನಡ ನಾಡಿನ ಸ್ಥಳನಾಮಗಳ ಸಂಶೋಧನೆನು ಕುರಿತು. ಆಯಾ ಪ್ರದೇಶದವರು ತಮ್ಮ ತಮ್ಮ ಸ್ಥಳಗಳ ಹೆಸರಿನ ಬಗ್ಗೆ ಕುತೂಹಲವನ್ನು ತಾಳಿ ಯಾರನ್ನಾದರೂ ಈ ಕೆಲಸಕ್ಕೆ ಹಚ್ಚಿದರೆ ಒಟ್ಟು ಕೆಲಸ ಮುಗಿದಾಗ ಕನ್ನಾಡಿನ ಮಾನವಿಕ ಭೂವಿವರ ಅನಾಯಾಸವಾಗಿ ನಮಗೆ ಲಭ್ಯವಾಗುವುದು. ಹೇಗೆ ತನ್ನ 'ಪಾಡಿ' ಮತ್ತು 'ಪಟ್ಟಿ' ಸಂಶೋಧನೆಯಿಂದ ಕನ್ನಾಡು ಮಹಾರಾಷ್ಟ್ರದಲ್ಲಿ ವ್ಯಾಪಿಸಿದ್ದ ಕಥೆ ಗೋಚರವಾಯಿತೋ ಹಾಗೆ.

ಬರಿಯ ಅರ್ಧ ತಾಸಿನ ನನ್ನ ಈ ಸಂದರ್ಶನದಲ್ಲಿ ಶಂಬಾ ಅವರ ಉಲ್ಲಾಸ, ಉಲ್ಲೇಖನೀಯವಾಗಿದೆ. ಕಾರಣ 'ನಾಗಪ್ರತಿಮೆ' ಮುದ್ರಣವೆಲ್ಲ ಮುಗಿದು ಮುನ್ನುಡಿಯ ಕರಡು ತಿದ್ದುವ ಕೊನೆಯ ಮಜಲನ್ನು ಮುಟ್ಟಿದೆ. ಇದರ ಸಂತೋಷ ಅವರ ನುಡಿಯಲ್ಲಿ ನಡೆಯಲ್ಲಿ ವ್ಯಕ್ತವಾಗುತ್ತಿತ್ತು. ಗೊಡ್ಡು ಪಂಡಿತರ ಮೂಗು ಮುರಿ

ಯುವ ಈ ಅಪ್ರತಿಮ ಸಂಶೋಧನೆ ಶಂಬಾರ ಕೀರ್ತಿಗೆ ಗುಡಿ ಕಟ್ಟುವುದರಲ್ಲಿ ಸಂದೇಹವಿಲ್ಲ. ಆದರೆ ನಮ್ಮ ವಿಶ್ವವಿದ್ಯಾಲಯದ ಕೋಡು ಪಂಡಿತರಿಗೆ ಮಾತ್ರ ಇಂಥ ಕೃತಿಯು ಗೊಡವೆಯೂ ಇಲ್ಲ. ಅದರ ಮಹಾನ್ ವ್ಯಕ್ತಿತ್ವದ ಗೋಚರವೂ ಇಲ್ಲ.

ಶಂಬಾ ಮನೆಯೊಳಗೆ ನಾನು ಹೋಗುತ್ತಿದ್ದಂತೆ ಕೆಂದೂಳಿ ಎಬ್ಬಿಸಿಕೊಂಡು ಬರುತ್ತಿದ್ದ ಮಹಿಷ ಸಂದೋಹ ಕನ್ನಾಡಿನ ವಿದ್ವಜ್ಜನದ ಬಿಂದು ಪ್ರತೀಕವೋ ಶಂಬಾ ಪರಿಭಾಷೆಯಲ್ಲಿ 'ಪ್ರತಿಮೆ' ಯೋ ಆದೀತು. ಆ ಬಡ ಎಮ್ಮೆಗಳಿಗೆ ಶಂಬಾರ ಪರಿಜ್ಞಾನ ಇಲ್ಲ. ಗೌಳಿ ಕರೆದಲ್ಲಿ ಹೋಗಿ ಹಾಲನ್ನು ಇಳಿಸಿ ರೊಕ್ಕವನ್ನೊಯ್ಯುವ ಈ ಆರ್ಥಿಕ ಘಟಕಗಳಿಂದ ಯಾವ ಸಂಸ್ಕೃತಿ ಉಳಿದೀತು ಎಂಥದ್ದು ಬೆಳೆದೀತು?

ಡಿಗ್ರಿ, ಡಾಕ್ಟರೇಟುಗಳ ರೆಕ್ಕೆ ಪುಕ್ಕ ಇಲ್ಲದ, ಸಮಿತಿ ಸದಸ್ಯತ್ವದ ನೊರೆ ಇಲ್ಲದ, ಸರಕಾರಿ ಬಿರುದುಬಾವಲಿಯ ವಿಶೇಷ ಹೊರೆಯಿಲ್ಲದ, ಶಂಬಾ ಕನ್ನಡಿಗರಲ್ಲಿ ಸಾಮಾನ್ಯವಾಗಿ ಕಾಣಿಸದ ಬೌದ್ಧಿಕ ಗಹನತೆ ಮತ್ತು ಹರವಿಗೆ ಒಂದು ಪ್ರತಿಮೆ ಆದಾರು. ಸಂಶೋಧನೆಯ ಮೂಲ ಪ್ರತಿಮೆ, ವಿದ್ವತ್ತಿನ ಸೀಮಾಪುರುಷ ಶಂಬಾ ಸಾಧನಕೇರಿಯ ತಪೋನಂದನದಲ್ಲಿ ಸದ್ದಿಲ್ಲದೆ ಕನ್ನಡವನ್ನು ಅರ್ಥವತ್ತಾಗಿ ಕಟ್ಟಿದ ಕೆಚ್ಚೆದೆಯು ವೈಚಾರಿಕ.

### ಉಳಿಯುವ ಮಾತು

ಸಕ್ತುಂ ಇವ ತಿತಉನಾ ಪುನಂತಃ ಯತ್ರ ಧೀರಾಃ
ಮನಸಾ ವಾಚಂ ಅಕ್ರತ
(ಧಾನ್ಯವನ್ನು ಕೇರಿ ಪವಿತ್ರಗೊಳಿಸುವಂತೆ ಧೀರರು
ವಿಚಾರ ವಿಮರ್ಶಗಳಿಂದ ವಾಕ್ಕನ್ನು (ಜ್ಞಾನವನ್ನು)
ಶುದ್ಧವಾಗಿಸಿಕೊಳ್ಳುತ್ತಾರೆ)

oo oo oo

ಮಾನವೀಯ ಕೃತಿಗಳಲ್ಲಿ ಆಯಾ ವ್ಯಕ್ತಿಗಳ ಬುದ್ಧಿಪುರಸ್ಸರ ಅಥವಾ ಅಬುದ್ಧಿಪುರಸ್ಸರ ಕೈವಾಡವೇ ಕಾಣುತ್ತಿರುವಾಗ ಅದಕ್ಕೆ ಪರಮಾತ್ಮನೆಂಬವನನ್ನು ಹೊಣೆಗಾರನನ್ನಾಗಿಸುವಲ್ಲಿ ಆ ಪರ ಮಾತ್ಮನಿಗೆ ಅನ್ಯಾಯವಾಗುತ್ತದೆ.

೦೦ ೦೦ ೦೦

ಇಂದಿನ ಪ್ರಗತ ದೇಶಗಳು ಬಟ್ಟೆಯನ್ನೂ ಅರಿಯದ ಕಾಲದಲ್ಲಿ ಭರತಖಂಡವು ಜ್ಞಾನ ವಿಜ್ಞಾನ ಶಿಖರದಲ್ಲಿ ಇದ್ದಿತು; ಭಾರತೀ ಯರು ತಮ್ಮ ಸನಾತನ ಧರ್ಮ-ಸಂಸ್ಕೃತಿಯನ್ನು ಈ ವರೆಗೂ ಉಳಿಸಿಕೊಡು ಬಂದಿದ್ದಾರೆ ಎಂಬೀ ಬಗೆಯ ಸ್ವಾಭಿಮಾನ ಯುಕ್ತ ಆವೇಶದ ಮಾತುಗಳಿಂದ ತುಂಬಿದ ನಮ್ಮ ಸಾಂಸ್ಕೃತಿಕ ಇತಿಹಾಸ (ಗಳನ್ನು) ಓದುವಾಗ, ಹಿಗ್ಗಿ ಮೈಯುಬ್ಬಿದವನಾದಂದಿನ ಚಿಕ್ಕಂದಿನ ನೆನಪುಗಳು ಬರುತ್ತವೆ. ಆದರೆ ಆಮೇಲೆ ನಾಡಿನ ಜೀವನದಲ್ಲಿ ಪ್ರತ್ಯಕ್ಷ ಭಾಗವಹಿಸುವಾಗ ನಮ್ಮೊಳಗಿನ ಶ್ರದ್ಧೆ ಮತ್ತು ಪ್ರತ್ಯಕ್ಷ ಜೀವನರೀತಿ ಇವೆರಡಲ್ಲಿ ಇರುವ ವಿಪರೀತ ಅಂತರವು ಕಂಡು ಬಂದಿತು. ನಿನ್ನೆ–ಇಂದುಗಳಲ್ಲಿ ಏನಾದರೂ ಕಾರ್ಯಕಾರಣ ಸಂಬಂಧ ಉಂಟೆ? ನಿನ್ನೆಗಳೇ ಇಂದಿನ್ನೂ ಮಾರ್ಪಡುತ್ತಾ ಬಂದಿರುವುದು ನಿಜವಿದ್ದಲ್ಲಿ, ಇಂದಿನ ಜೀವನ ರೀತಿಯೊಳಗಿನ ದ್ವಿಧಾ ಭಾವ: ಪ್ರದರ್ಶನ ಮಾಡುವ ಶ್ರದ್ಧೆ ಹಾಗೂ ಪ್ರತ್ಯಕ್ಷ ಆಚರಣೆ ಇವೆರಡ ರೊಳಗಿನ ಈ ಅಂತರದ ಉಗಮವು ಎಲ್ಲಿದೆ? ಎಂಬುದನ್ನೆ ಕಂಡು ಕೇಳುವುದು ಅವಶ್ಯವೆನಿಸಿತು. ಈ ಹುಚ್ಚು ನನ್ನನ್ನು ಕಳೆದ ೩೫–೪೦ ವರ್ಷಗಳಿಂದ ಎಲ್ಲಿಂದೆಲ್ಲಿಗೊ ತಳ್ಳಿಕೊಂಡು ಹೊರಟಿದೆ.

೦೦ ೦೦ ೦೦

ಆಚಾರ-ವಿಚಾರಕ್ಕೆ ಏರಿಸದ "ಸಂಸ್ಕಾರ" ಸಂಸ್ಕಾರವೆ ಅಲ್ಲ; ನಡೆವಳಿ-ನುಡಿವಳಿಗಳನ್ನು ರೂಪಿಸಬಲ್ಲ ಸಂಸ್ಕಾರಗಳೇ ಜೀವಂತ ಸಂಸ್ಕಾರಗಳು. ಸಂಸ್ಕಾರಗಳ ಜೀವಂತತನದ ಮೇಲೆ, ಆ ಸಂಸ್ಕೃ

ತಿಯ ಚೈತನ್ಯ ಶಕ್ತಿ, ಗತಿಮಾನತೆ ಅವಲಂಬಿಸಿದೆ. ನಿರ್ಜೀವ ಸಾಂಪ್ರದಾಯಿಕ ಸಂಸ್ಕಾರಗಳು ಕೋಟಲೆಗೆ ಒಳಗಾಗಿಸುವ ಸಂಸ್ಕೃತಿಯಿಂದ ಯಾವ ಜನಾಂಗವೂ ಏಳ್ಗೆಯನ್ನು ಹೊಂದಿಲ್ಲ; ಹೊಂದಲೂ ಸಾಧ್ಯವಿಲ್ಲ. ಏಕೆಂದರೆ "ಪರಿಮಿತಂ ಭೂತಂ"... ನಿನ್ನೆಯಲ್ಲಿಯೆ ಮುಗಿದ–ಪೂರ್ಣವಿರುವ "ಸಂಸ್ಕೃತಿ" ಜೀವಂತ ಚೈತನ್ಯಕ್ಕೆ ಎರವಾದ ಸಂಸ್ಕೃತಿಯಾಗಿರಲಿಕ್ಕೆ ಬೇಕು. ಇಂದಿನಲ್ಲಿ ಚಿಗುರಿ, ನಾಳೆಯಲ್ಲಿ ಕುಡಿವರಿದು ಹಬ್ಬುವ ಸರ್ಜಕ ಪ್ರವೃತ್ತಿಯ ಅಂತಃಶಕ್ತಿ ಎಂದೂ ಕುಗ್ಗದಂತೆ ನೋಡಿಕೊಳ್ಳುವ ದಕ್ಷತೆಯು ಬೇಕು, ರಾಜಕೀಯ ಸಾಮಾಜಿಕ ನೇತಾರರದಲ್ಲಿ... ಅಪರಿಮಿತಂ ಭವ್ಯಂ.

(ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ, ೧೯೬೭)

"ನಿನ್ನೆ" ಎಲ್ಲವೂ ದೋಷ ರಹಿತವೇ ಆಗಿದ್ದರೆ ಇಂದು ನರಳುವ, ಬಳಲುವ ಪಾಡು ಏಕೆ ಉಂಟಾಗುತ್ತಿತ್ತು? ನಿನ್ನೆಯೊಳಗಿನ ಗುಣದೊಡನೆ ಬೆರೆತುಕೊಂಡ ಕುಂದುಕೊರತೆಗಳನ್ನು ಗುಣವೆಂದು ಎತ್ತಿಕೊಂಡಾಡುವುದು ನಮ್ಮ ನಾಳಿನ ನೆಮ್ಮದಿಗೆ ಸಾಧನವಾಗದು. ಆದುದರಿಂದ ಹಿಂದಿನದು ಎಷ್ಟೇ ಹಿರಿದಾಗಿದ್ದರೂ ಏಳ್ಗೆಯನ್ನೇ ಹಾರಯಿಸುವ ಜನಾಂಗದವರು ಅದರ ಗುಣದೋಷಗಳನ್ನು ಸರಿಯಾಗಿ ಅರಿತುಕೊಳ್ಳುವುದು ಕರ್ತವ್ಯವಾಗಿದೆ.

(ಕರ್ಣನ ಮೂರು ಚಿತ್ರಗಳು,೧೯೪೭)

ಸತ್ಯವೇ ದೇವರು. ಸತ್ಯದ ಸಾಕ್ಷಾತ್ಕಾರವಾಗುವುದಕ್ಕೆ ಇತಿಹಾಸ ಶಾಸ್ತ್ರವೂ ಒಂದು ದಿವ್ಯವಾದ ಕೈದೀಪ. ನಮ್ಮ ನಾಡಿನ ಏಳಿಗೆಗೆ ಅಡ್ಡಿ ಬರುತ್ತಲಿರುವ ಜಾತಿ, ಕುಲ, ಧರ್ಮ, ಮತ, ಪಂಥಗಳ ದುರಭಿಮಾನಗಳನ್ನು ತೊಡೆದು ಹಾಕುವುದಕ್ಕೆ ಸತ್ಯ–ಇತಿಹಾಸದಂಥ ಅಮೋಘ ಸಾಧನ ಬೇರೊಂದಿಲ್ಲ. ನಮ್ಮ ನಾಡಿನಲ್ಲಿ ಹಿಂದಕ್ಕೆ ನಡೆದ ಅನುಲೋಮ, ಪ್ರತಿಲೋಮ ವಿವಾಹಗಳ ಇತಿಹಾಸವು ಬೆಳಕಿಗೆ ಬಂದರೆ ನಮ್ಮ ಜನಗಳ ಜಾತಿಯ ಹೆಮ್ಮೆ, ಕುಲದ ಬಿಂಕ

ಗಳೆಲ್ಲವೂ ಸಡಿಲದೆ ಇರಲಾರವು.

......ಯುಗ-ಧರ್ಮವನ್ನರಿತುಕೊಂಡು ಕಾಲಕ್ಕೆ ತಕ್ಕಂತೆ ತಮ್ಮನ್ನು ಮಾರ್ಪಡಿಸಿಕೊಳ್ಳುವುದರಲ್ಲಿಯೆ ಜಾಣತನವಿದೆ. ಮೊದಲು ನಾವು ಯಾರೇ ಇರಲಿ, ಎಲ್ಲಿಯವರೆ ಇರಲಿ, ನಾವು ಈಗ ನೆಲಸಿರುವ ನಾಡು ನಮ್ಮದು. ಅದರೊಡನೆ ಸುರಸವಾಗಿ ಆ ನಾಡಿನ ಏಳ್ಗೆಗಾಗಿ, ಆ ನಾಡಿನ ಮುಖಾಂತರವಾಗಿ ಮಾನವ ಕೋಟಿಯ ಕಲ್ಯಾಣಕ್ಕಾಗಿ ದುಡಿಯುವುದರಲ್ಲಿಯೆ ನಮ್ಮ ಮೇಲ್ಮೆಯೂ ಇದೆ. ಇದುವೆ ಇಂದಿನ ಧರ್ಮ. ಇದಕ್ಕೆ ವಿರುದ್ಧವಾಗಿ ನಡೆವುದೆ ಅಧರ್ಮ.

(ಕನ್ನಡದ ನೆಲೆ, ೧೯೩೭)

# ವಿ. ಸೀ.

ಸಾಹಿತ್ಯ ಕೋವಿದರಲ್ಲಿ ವಿ.ಸೀ. ಅವರಷ್ಟು ನಯವಿದರನ್ನು ಬೇರೆ ಕಾಣೆವು. ವಿಶ್ವವಿದ್ಯಾನಿಲಯದ ಸೇವೆಯಲ್ಲಿದ್ದಾಗ ಅವರಿಗೆ ಲಭ್ಯ ವಾಗದ ಪ್ರೊಫೆಸರ್‌ಗಿರಿಯನ್ನು ಅವರ ಹೆಸರಿನ ಹಿಂದೆ ಯಾರಾ ದರೂ ತಗಲಿಸಿದಾಗ 'ನಾನು ಅಲ್ಲಪ್ಪಾ ಪ್ರೊಫೆಸರ್' ಎನ್ನುವ, ತನ್ನ ಓರಗೆಯ ಸಾಹಿತಿಗಳ ಕುರಿತು ಗಂಟೆಕಟ್ಟಲೆ ಪ್ರಶಂಸನೆ ಮಾಡುವ, ತನಗಿಂತ ಹಿರಿಯರಾದ ವೆಂಕಣ್ಣಯ್ಯ, ವೆಂಕಟನಾರ ಣಪ್ಪ, ಬಿ.ಎಂ.ಶ್ರೀ., ಪಂಜೆ ಅವರನ್ನು Giants ಎಂದು ತಾನವರೆ ಅನುಸರಣ ಮಾಡಿದ ವಿದ್ಯಾರ್ಥಿಯೇನೋ ಎಂಬಂತೆ ನುಡಿವ ವಿ. ಸೀತಾರಾಮಯ್ಯ ಕನ್ನಡಿಗರ ಸೌಜನ್ಯ, ನಯವಿನಯಗಳಿಗೆ ಎರಡನೆ ಹೆಸರಾಗಿದ್ದಾರೆ. ಸ್ಥಾನ, ಮಾನ, ಸಂಮಾನ, ಜನ ಧನ ಬಲಗಳಲ್ಲಿ ಇತರ ಸಾಹಿತಿಗಳಿಗೆ ಭಿನ್ನರಾಗಿ, ಅವರಿಗೆ ಎಡೆಕೊಟ್ಟು ತೀರ ಹಿಂದುಗಡೆ ಸ್ವೇಚ್ಛೆಯಿಂದ ನಿಂತು ಸರದಿ ಕಾಯುವ ದುಮ್ಮಾ ನಕ್ಕೆ ತಲೆ ತೆತ್ತ ಈ ಮಹನೀಯರು ಕನ್ನಡ ಸಾರಸ್ವತ ಲೋಕದ ಒಂದು ಜ್ವಲಂತ ಸ್ಫುಲಿಂಗವೆಂದು ಇವರನ್ನು ಮುಂಡಾಸಿಲ್ಲದೆ ನೋಡಿದವರು – ಈಗಿನ ಈ ಎಪ್ಪತ್ತರಲ್ಲಿ – ಯಾರೂ ಊಹಿಸ ಲಾರರು. ಆದರೆ ಐದು ಮಿನಿಟು ಇವರ ಹತ್ತಿರ ಮಾತನಾಡಿದರೆ ಸಾಕು, ಇವರಂಥ ಪಂಡಿತರು ದೇಶದಲ್ಲೇ ವಿರಳ ಎನಿಸೀತು. ಅರ್ಥ ಶಾಸ್ತ್ರ, ಆಂಗ್ಲ-ಕನ್ನಡ-ಬಂಗಾಳಿ-ಸಂಸ್ಕೃತ ಸಾಹಿತ್ಯ, ಏಕೆ ವಿಶ್ವ ಸಾಹಿತ್ಯದ ಚಲನವಲನಗಳ ತುಲನಾತ್ಮಕ ಅಭ್ಯಾಸವನ್ನು ಕೈಗೊಂ ಡಿರುವ, ಪ್ರತಿಯೊಂದರಲ್ಲೂ ಅಧಿಕಾರವಾಣಿಯಿಂದ ನುಡಿಯು

ಬಲ್ಲ ಈ ಸಾಹಿತ್ಯಶಕ್ತಿ ಪೂರ್ತಿ ಬರವಣಿಗೆಗೆ ಇಳಿಯದೆ ಮಾತಿನಲ್ಲೇ ಮಗ್ನವಾಗಿರುವುದು ಅವರ ಸ್ನೇಹಿತರ ಒಂದು ಕೊರಗು. ಮಹಾಭಾರತದ ವಿಸ್ತೃತ ರಂಗಭೂಮಿಯ ಸಾದೃಶ್ಯದಿಂದ, ನಿಟ್ಟಿನಿಂದ ಅರ್ವಾಚೀನ ಸಾಹಿತ್ಯ ಪರಿವರ್ತನೆಗಳ ಮೌಲ್ಯಾಂಕನವನ್ನು ಮಾಡಬಲ್ಲ ಪಾಂಡಿತ್ಯ ಮೈಗೂಡಿಸಿಕೊಂಡವರು ದೇಶದಲ್ಲೇ ವಿರಳರಾಗಿರುವಾಗ ವಿ.ಸೀ. ಅಂಥ ವಿಮರ್ಶಕರು ಕನ್ನಡ ನಾಡಿಗೆ ಮಾತ್ರವಲ್ಲ, ಭಾರತಕ್ಕೇ ಭೂಷಣಪ್ರಾಯರು ಎನಬೇಕಾಗುತ್ತದೆ. ಅಂತರ್ ಭಾರತೀಯ ಸಾಹಿತ್ಯ ವೇದಿಕೆಗಳಲ್ಲಿ ದೇಶದ ನಾನಾ ಕಡೆಗೆ ವಿ.ಸೀ. ಆಮಂತ್ರಿತರಾಗುವುದು ಈ ಗುಣವಿಶೇಷಕ್ಕಾಗಿ.

ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ (–ತನ್ನನ್ನುಳಿದ ಇತರ ಸಾಹಿತಿಗಳಿಗಿಂತ) ಪಿರಿಯರಿಲ್ಲ' ಎಂಬ ಪ್ರಾಮಾಣಿಕವಾದ ಸದಾಶಯವನ್ನು ಸರ್ವದಾ ಹೃದಯಸ್ಥವಾಗಿಸಿಕೊಂಡ ವಿ.ಸೀ. ಇತರ ಸಾಹಿತಿಗಳ ಕೃತಿಗಳ ವಿಮರ್ಶೆ ಮಾಡುವುದರ ಸೊಗಸು, ಸ್ವಾರಸ್ಯಗಳನ್ನು ಹಿಡಿದಿಟ್ಟರೆ ಎಂತೆಂಥ ಉದ್ದಾಮ ವಿಮರ್ಶನ ಸಾಹಿತ್ಯ ನಮಗೊದಗುತ್ತಿತ್ತು. ರವೀಂದ್ರನಾಥ ಠಾಕೂರರ Where the mind is without fear –ಎಲ್ಲಿ ಮನಕಳುಕಿರದೊ (ಎಂ. ಎನ್. ಕಾಮತ್ ಅನುವಾದ) – ಇದರ ಮೂಲದ ಕುರಿತು ಅವರು ಆಡಿದ ವಿಮರ್ಶೆಯ ಮಾತು ಈಗಲೂ ನನಗೆ ನೆನಪಿದೆ. ಅದನ್ನು ಮೂಲ ಬಂಗಾಳಿಯಲ್ಲಿ ಕೈಯೆತ್ತಿ, ವಿ.ಸೀ. ಭಂಗಿಯಲ್ಲಿ 'ಚಿತ್ತ ಜೇಥಾ ಭಯ ಶೂನ್ಯ, ಉಚ್ಚ ಜೇಥಾ ಶಿರ್' ಎನ್ನುವಾಗ ಅವರದರಲ್ಲಿ ತಲ್ಲೀನರಾಗಿಬಿಡುತ್ತಾರೆ. ಎಲ್ಲ ಅನುವಾದದಲ್ಲಿ ಮುಖ್ಯವಾದೊಂದು ಭಾಗ (ಹೃದಿ ಶತಖಂಡ ಕರಿ) ಬಿಟ್ಟುಹೋಗಿದೆ ಎಂದು ವಿಮರ್ಶಿಸುತ್ತಾರೆ. ರಸಾನುಭವ – ವಿಮರ್ಶೆ, ಒಂದನ್ನೊಂದು ಬಿಡಲಾರದ, ವಿ.ಸೀ.ಯವರಿಗೇ ವಿಶಿಷ್ಟವಾಗಿರುವ ಹೆಚ್ಚುಗಾರಿಕೆ. ಓದುವಾಗ ತನ್ಮಯತೆ ಪಡೆಯುವುದರಲ್ಲಾಗಲಿ ವಿಮರ್ಶೆ ಮಾಡುವಾಗ

ಪ್ರಾಮಾಣಿಕವಾದ ಮಾತನಾಡುವುದರಲ್ಲಾಗಲಿ ವಿ.ಸೀ.ಯನ್ನು ಯಾರೂ ಮೀರಿಸಲಾರರು – ಇದು ಖಾಸಗಿಯಲ್ಲಿ. ಬಹಿರಂಗ ವಾಗಿ ಇವರ ಧೋರಣೆ ಬೇರೆ – ಅಲ್ಲಿ ಯಾರನ್ನೂ ನೋಯಿಸುವ ಇಚ್ಛೆ ಇಲ್ಲ. ತೇಲುವ ಮಾತು, ಹೀಗಿರಬಹುದೇನೋ ಎಂಬ ವಿಕಲ್ಪ ಸೂಚನೆ, ಹೀಗಿದ್ದರೆ ಒಳಿತಾಗದೆ ಎಂಬ ಶಂಕೆ. ಮಾತಿಂದಾಗಲಿ, ಕೃತಿಯಿಂದಾಗಲೀ ನೋಯಿಸಲಾರದ, ತಾನು ಎಷ್ಟು ಬೇಕಾದರೂ ನೊಂದುಕೊಳ್ಳುವ ಈ ಮಹಾ ಜೀವಕ್ಕೆ ಮೊನ್ನೆ ತಾನೇ ಬೆಂಗಳೂರಿನ ಕನ್ನಡಿಗರು ಒಂದು ಸಂಮಾನ ಏರ್ಪಡಿಸಿ ಸ್ವಲ್ಪ ಮಟ್ಟಿಗೆ ಋಣ ಹರಿಸಿಕೊಂಡರು.

ಸಂಗೀತ, ಚಿತ್ರ–ಶಿಲ್ಪ ಕಲೆಗಳಲ್ಲಿಯೂ ವಿ.ಸೀ.ಗೆ ಪರಿಣತಿ ಯುಂಟು. ಸಂಗೀತದ ಮಾಧುರ್ಯ, ಚಿತ್ರಕಲೆಯ ವರ್ಣರಂಜನೆ ಮತ್ತು ಶಿಲ್ಪದ ಖಚಿತತೆ ವಿ.ಸೀ. ಸಾಹಿತ್ಯದ ಮೇಲೆ ಪರಿಣಾಮ ಮಾಡಿದೆ. ಅವರ ಶೈಲಿಯ ಬನಿ ಸಂಗೀತಕ್ಕೆ ಋಣಿ. ವಿಮರ್ಶೆಯ ಮಾತುಗಳ ವೈವಿಧ್ಯ, ಒತ್ತು, ವರ್ಣಚಿತ್ರದ ಸೊಬಗಿಗೆ ಮಾರು ಹೋಗಿದೆ. ಅವರ 'ದೇಸಿ' ಪದಗಳ ಖಚಿತತೆ ಉಳಿಯ ಪೆಟ್ಟಿನಂತೆ ವಿಚಾರಗಳನ್ನು ತುಂಡರಿಸಿ, ಕಂಡರಸಿ ನಮ್ಮ ಮುಂದೆ ನಿಲ್ಲಿಸುತ್ತದೆ. ಸಂಗೀತ ಶಾಸ್ತ್ರದಲ್ಲಿ ರಾಳ್ಳಪಲ್ಲಿಯವರನ್ನು ಬಿಟ್ಟರೆ ವಿ.ಸೀ. ಅವರೇ ದಾಸಸಂಗೀತದ ಪರಂಪರೆಯನ್ನು ಶಾಸ್ತ್ರೀಯವಾಗಿ ಬಲ್ಲವರು. ಅವರು ಕೆಲ ವರ್ಷಗಳ ಹಿಂದೆ ಪುರಂದರದಾಸರ ಕುರಿತು ಮಾಡಿದ ಉಪನ್ಯಾಸವನ್ನು ಕೇಳಿ ಮದರಾಸಿನ ಸಂಗೀತಶಾಸ್ತ್ರಜ್ಞರೆಲ್ಲ ತಲೆ ದೂಗಿ ಮೆಚ್ಚಿಕೊಂಡರಂತೆ. ನ್ಯಾಶನಲ್ ಬುಕ್ ಟ್ರಸ್ಟ್‌ಗೆ ವಿ.ಸೀ. ಬರೆದುಕೊಟ್ಟ 'ಪುರಂದರದಾಸ' ಇನ್ನೂ ಕೋಶಾವಸ್ಥೆಯಲ್ಲಿದೆ. ಇಲ್ಲಿ ವಿ.ಸೀ. ವಿಮರ್ಶನದೃಷ್ಟಿ ಸಂಪ್ರದಾಯದ ಕೆಲವು ನಂಬಿಕೆ ಗಳನ್ನು ಅಲ್ಲಾಡಿಸಿ ಕಾರ್ಯತತ್ಪರವಾಗಿದೆಯಂತೆ. ಸಂಗೀತ ಹೇಗೋ ಹಾಗೆ ಪಾಶ್ಚಾತ್ಯ ವರ್ಣಚಿತ್ರಗಳ ಕುರಿತೂ ವಿ.ಸೀ.

ಬಾಯ್ಸ್ಕೌಟ್ ಆಡಬಲ್ಲರು, ಚಿತ್ರಗಳನ್ನು ನೋಡಿ ಆನಂದಿಸ ಬಲ್ಲರು, ಇತರ ಜಿಜ್ಞಾಸುಗಳಿಗೆ ಅವುಗಳ ಸೌಂದರ್ಯದ ನೆಲೆ ಯನ್ನು ಸೂಚಿಸಬಲ್ಲರು.

ವಿ.ಸೀ. ಜೀವನ ಒಂದು ದೀರ್ಘ ಪಂಪಾಯಾತ್ರೆ. ಕನ್ನಡ ನಾಡಿನ ಮೂಲೆಮೂಲೆಗಳಿಗೂ ಸಂಚರಿಸಿ, ಕಷ್ಟನಷ್ಟಗಳನ್ನನುಭವಿಸಿ, ನವೋದಿತ ಕನ್ನಡ ಸಾಹಿತ್ಯದ ಸಂದೇಶವನ್ನು ಕರ್ನಾಟಕದಲ್ಲಿ ಸಾರಿದವರಲ್ಲಿ ವಿ.ಸೀ. ಅಗ್ರ ಪಂಕ್ತಿಗೆ ಸೇರಿದವರು. ಯಾವ ಸೌಕರ್ಯವೂ ಇಲ್ಲದ ಆ ಕಾಲದಲ್ಲಿ ಕರೆದಲ್ಲಿಗೆ ಹೋಗಿ, ಅಖಿಲ ಕರ್ನಾಟಕದ ಜನ ಗಳ ಮನಸ್ಸನ್ನು ತಮ್ಮ ವಿದ್ವತ್ತಿನಿಂದಲೂ, ವಾಗ್ಮಿತೆಯಿಂದಲೂ ಸೂರೆಗೊಂಡ ತಲೆಮಾರಿನ ಹಿರಿಯರಲ್ಲಿ ವಿ.ಸೀ. ಮುಖ್ಯರು. ಇಂಥ ಪರಿವ್ರಾಜಕತನದಿಂದ ಅವರಲ್ಲಿ ಮೂಡಿರುವ ಅಖಿಲ ಕರ್ನಾಟಕ ದೃಷ್ಟಿ, ಸಹನೆ, ಔದಾರ್ಯ – ಇಂದಿನ ಕಾರ್ಯನಿರತ ಯುವಜನ ಲೇಖಕರು ಅಷ್ಟಾಗಿ ರೂಢಿಸಿಕೊಳ್ಳದ ಆದರ್ಶಗಳಾಗಿ ಉಳಿದಿರು ವುದು ಒಟ್ಟು ನಾಡಿನ ಪ್ರಗತಿಯ ದೃಷ್ಟಿಯಿಂದ ಶೋಚನೀಯವೆ ಸರಿ. ಹಳೆಯದನ್ನೆಲ್ಲಗಳೆಯುವ ಈ ನಿಷೇಧಾತ್ಮಕ ಪ್ರವೃತ್ತಿ, ಜೀವನ ವಿಮುಖವಾದ, ಸಾಹಿತ್ಯ ವಿಘಾತಕವಾದ ಒಂದು ಬಿರುಕು. ಸಾಹಿತ್ಯದಲ್ಲಾಗಲಿ, ಬದುಕಿನಲ್ಲಾಗಲಿ ವಿ.ಸೀ. ಅವರು ಎತ್ತಿ ಹಿಡಿದ ತತ್ತ್ವಗಳು ಸಾಹಿತ್ಯ ಮತ್ತು ಬದುಕಿನ ನಿಜವಾದ ಮೌಲ್ಯ ಗಳೆಂದು ಈ ಅತಿರೇಕವಾದಿಗಳಿಗೆ, ನೂತನದ ಉನ್ಮಾದಿಗಳಿಗೆ ಕಾಣದೆ ಹೋಗಿರುವುದು ಅವರಿಗೇ ಸ್ವಂತಕ್ಕೆ ಹಾನಿಕರ.

೧೧–೧೧–೧೯೩೫ರಲ್ಲಿ 'ನೆಳಲು-ಬೆಳಕು' ಕಾವ್ಯಸಂಗ್ರಹಕ್ಕೆ ಮುನ್ನುಡಿ ಬರೆಯುತ್ತ ವಿ.ಸೀ. ಭಾವಗೀತದ ಉಗಮ ಸ್ಥಾನದ ನಿರ್ದೇಶನ ಮಾಡಿದ್ದಾರೆ: 'ಹೀಗೆ ಮನಸ್ಸಿನ ಸ್ಥಿತಿ, ಒದಗಿದ ಯಾವುದೋ ಸನ್ನಿವೇಶ, ಬಲಿದ ಒಂದು ಆವರಣ, ಬಂದ ಒಂದು ಬೇಸರ, ಹುರುಪು, ವಿಜೃಂಭಣ, ಆವೇಗ, ಸಂದೇಹ,

ಸೊರಗು ಮುಂತಾದುವನ್ನು ಭಾವಗೀತವು ಒಂದು ವಿಶೇಷ ರೀತಿಯಲ್ಲಿ ಪ್ರತಿಬಿಂಬಿಸುತ್ತದೆ. ಸಂಪ್ರದಾಯದ ಕಾವ್ಯಗಳಲ್ಲಿನ ರಸಸ್ಥಾನಗಳಿಗೆ ಸಮಾನವಾದುದು ಅದು. ಪಂಪನ ಆದಿಪುರಾಣ, ಸಮಸ್ತ ಭಾರತ, ಹಾಗೇ ಕುಮಾರವ್ಯಾಸನನ್ನು ತರಗತಿಗಳಲ್ಲಿ ಮೂವತ್ತು ವರ್ಷ ಕಾಲ ವಿದ್ಯಾರ್ಥಿಗಳಿಗೆ ಉಪದೇಶ ಮಾಡಿದ ವಿ.ಸೀ. ವಿಮರ್ಶೆ ಹಿಂದಿನ ಕಾವ್ಯ ಪರಂಪರೆಯನ್ನು ಇಂದಿನದರೊಡನೆ ಸಮೀಕರಿಸಿ ಸಮಾವಿಷ್ಟಗೊಳಿಸಿ ಸಾರ್ಥಕವಾಗಿದೆ. ೩೫ ವರ್ಷಗಳ ಹಿಂದೆ ವಿ.ಸೀ. ತರುಣರೇ ಆಗಿರಬೇಕಷ್ಟೆ. ಆದರೂ ಆಗಿನ ಕಾಲದಲ್ಲಿ ಈ ಅಲ್ಲಗಳೆತನವು ನಮ್ಮ ಪ್ರಗತಿಶೀಲರಲ್ಲಿ ರೂಢವಾಗಿರಲಿಲ್ಲ. ಅದೇ ೩೫ ವರ್ಷಗಳ ತರುವಾಯ ವಿ.ಸೀ. ಕಾವ್ಯವನ್ನು ವಿಮರ್ಶಿಸುತ್ತ ಒಬ್ಬರು ನವ್ಯಮಹೋದಯರು 'ಅದು ಸಪ್ಪೆ' ಎಂದರು. 'ಯಾವುದೋ ತಾವು ನಿರ್ದೇಶಿಸುವ ಗುಣಹೀನತೆಯ ಪ್ರಮಾಣದಿಂದ ಸಪ್ಪೆ, ಎನಿಸಿದ ತನ್ನ ಕಾವ್ಯ ವಿಮರ್ಶೆಗೆ ವಿ.ಸೀ. ಮತ್ತೊಮ್ಮೆ ೭೦ರ ತರುಣನಾಗಿ ಉತ್ಸಾಹದ ಉತ್ತರ ನೀಡಿದ್ದಾರೆ. ಈ ಉತ್ತರ ನವ್ಯ ಮಾರ್ಗಾನುಸಾರಿಗಳ ವಿವೇಕಕ್ಕೆ ಒಂದು ಸವಾಲಿನಂತಿದೆ.

ಕಾವ್ಯ, ನಾಟಕ, ಪ್ರವಾಸ ಸಾಹಿತ್ಯ, ಶಾಸ್ತ್ರಕೃತಿ, ವಿಮರ್ಶೆ – ಹೀಗೆ ಸಾಹಿತ್ಯದ ವಿವಿಧ ರಂಗಗಳಲ್ಲಿ ಕೈಯಾಡಿಸಿ, ನಾಡಿನ ಉದ್ದಗಲ ಕಾಲೋಡಿಸಿ, ಕನ್ನಡಿಗರ ಹೃದಯದಲ್ಲಿ ತನ್ನ ವಾಗ್ಮಿತೆಯ ದೆಸೆಯಿಂದ ಲಾಸ್ಯವಾಡುತ್ತಿರುವ ಕನ್ನಡ ವಿಮರ್ಶಕರಲ್ಲಿ 'ನ ಭೂತೋ ನ ಭವಿಷ್ಯತಿ' ಮಟ್ಟದಲ್ಲಿ ನಿಂತಿದ್ದಾರೆ. ಈ ಆಚಾರ್ಯಪುರುಷರ ಹತ್ತಿರ ಅರ್ಧ ತಾಸು ಮಾತಾಡಿದರೆ ನಾಲ್ಕಾರು ಸಾಹಿತ್ಯದ ಉಪನ್ಯಾಸಗಳನ್ನು ಕೇಳಿದ ಸಂಪನ್ನ ಅನುಭವ ಶ್ರೋತೃವಿಗೆ ಆಗುತ್ತದೆ. ಬದುಕಿನ ಸಂಕಷ್ಟಗಳ ನಟ್ಟನಡುವೆ ತಾನು ನಿಂತಿದ್ದಾಗಲೂ ಪರರಿಗೆ ಒಂದು ನಗೆ, ಒಂದು ಕಳೆ, ಒಂದು ವಿಶ್ವಾಸ, ಒಂದು ಸಾಂತ್ವನ

ದಯಪಾಲಿಸಬಲ್ಲ ವಿ.ಸೀ. ಅವರ ಶ್ರೀಮಂತಿಕೆ, ಉದಾರಚರಿತ ಕನ್ನಡದ ಅಪೂರ್ವ ನಿಧಿ.

## ಉಳಿಯುವ ಮಾತು

"ಆದರೆ ಸಪ್ಪೆಗೂ ಒಂದು ಸ್ಥಾನವುಂಟು ಎಂದು ನನ್ನ ಭಾವನೆ. ಸಪ್ಪೆ ಪಥ್ಯಕಾರಿ...ಅದು ಒಂದು ರುಚಿ ಕೂಡ ಎಂದು ಹಲವರು ಬಲ್ಲರು......ಅಲ್ಲಿಗೂ ರುಚಿ ಒಬ್ಬೊಬ್ಬರದು ಒಂದೊಂದು ರೀತಿ. ಮೆಣಸು, ಶುಂಠಿ ಕೂಡಿಸಿದ ವೇಶ್ಯಾವಾಟಿಯ ಮಧು, ವ್ಹಿಸ್ಕಿ, ಕಾಕ್‌ಟೆಯ್ಲ್ ಚಪ್ಪರಿಸುವವರಿಗೆ, ನೀರು, ಹಾಲು, ಎಳನೀರು ಸಪ್ಪೆಯೇ. ಕಟ್ಲೆಟ್, ಬಿರಿಯಾನಿ, ತಂಡೂರಿ, ನೊಗಲೆ ಚಟ್ನಿ, ಪಲ್ಯ ಹೊಡೆಯುವವರಿಗಂತೂ ಖಂಡಿತ ಸಪ್ಪೆ. ಈ ಬಡ ಖಾದ್ಯಗಳು, ಪಾನಕಗಳು, ನಿಷ್ಠೀವನ ಶರಾವವೆಂದು ವೇಶ್ಯಾಧರಪಲ್ಲವದ ಮನೋಜ್ಞತೆಯನ್ನು ಹಳಿಯುವ ಸಾಧುಗಳ ಶುಚಿಗಮನ ಭುಜಂಗರಿಗೆ Dull habit ಎನಿಸುವಷ್ಟು ಕರುಣಾಜನಕ. ಆಗಲಿ ಆದರೆ ಆತ್ಮವಂಚನೆಯ ವೆಜಿಟೇಬಲ್ ಕಟ್ಲೆಟ್, ವೆಜಿಟೆಬಲ್ ಬಿರಿಯಾನಿ, ವೆಜಿಟೆಬಲ್ ಪಲಾವ್, ಸ್ವೀಟ್‌ಮೀಟ್ ಯಾರ ದೇವರಿಗೆ ನೈವೇದ್ಯ? ಕುರಿ ತಿನ್ನಿ, ಕೋಳಿತಿನ್ನಿ, ಹಂದಿ, ಮೀನು ತಿನ್ನಿ, ದನ ತಿನ್ನಿ, ಏಡಿ ತಿನ್ನಿ, ಸಂತೋಷ; ಈ ಅಧ್ವಾನವೇಕೆ ಎನಿಸುತ್ತಿದೆ; ಇಂದಿನ ಕೆಲವು ಹಸಿ, ಅಪಕ್ವ ಬೆರಕೆಗಳನ್ನು ಕಂಡರೆ; ಕೇಳಿದರೆ, ನನ್ನಂಥವರಿಗೆ 'ಮಣ್ಣು' ಸಂಪರ್ಕವಿಲ್ಲದ್ದರಿಂದ ನಮ್ಮ ಕವಿತೆ ಸಪ್ಪೆ ಎನ್ನುತ್ತಾರೆ – ಈ ಬೆಡಗಿನ ವಿದ್ವದ್ ನಿರ್ಮಾಪಕರು. ಇವರು ಮೆಚ್ಚುವ ಹಲವರಿಗೂ ಅದಿಲ್ಲ. ಅವರ ಬರವಣಿಗೆಯಲ್ಲೂ ವಿವೇಚನೆಯಲ್ಲಿಯೂ ಬರುವ ಮಾತುಗಳೇ ನಮ್ಮವಲ್ಲ; ನಮ್ಮ ಜನಕ್ಕೆ ಅರ್ಥವಾಗುವವಲ್ಲ. ಎಷ್ಟು ಬಗೆಯ ಪ್ರಜ್ಞೆಗಳು ಇವರ ಜಟಿಲತೆಯಲ್ಲಿ! ಎಲ್ಲ ವಿಲಾಯಿತಿಯಿಂದ ಹೊಸತಿಣಿಕಿ ತಂದ ಪರಕೀಯ

ಯತೆಗಳು. ಅಲ್ಲಿಗೆ ಬಂದಿರುವ Alienation ಮುಂತಾದ ಅರ್ಥದ ಮಾತುಗಳನ್ನು ಮನಸ್ಸಿನಲ್ಲಿಯೇ ನುಂಗಿ ವಿಮರ್ಶೆಯ ಶಿಲ್ಪಗಳನ್ನೂ ಹಂದರಗಳನ್ನೂ ಕಟ್ಟಿ ಬೆಲೆಗಳನ್ನು ಹಾಯಿಸುತ್ತಿದ್ದಾರೆ. ಅಲ್ಲಿನ ಸ್ಥಿತಿ, ಗತಿ, ರೀತಿ ನಮ್ಮದಾಗಿದ್ದರೆ ಆ ಮಾತು ಬೇರೆ. ಇಲ್ಲಿನ ಜೀವನ ಆ ತಲ್ಲಣಗಳನ್ನು ಕಾಣದು. ಇವರ ಬರವಣಿಗೆಗಳಲ್ಲಿಯೂ ಕಾಣದು.

...ಈ ತಿರಿಪೆ, ಅನುಕರಣ, ಅನುಸರಣ ಎಂದಿನಿಂದ ಬಂದುದೇ ಪ್ರಾಂತ ಸಾಹಿತ್ಯಗಳಿಗೆಲ್ಲ. ಹಿಂದೆ ಸಂಸ್ಕೃತ, ಪ್ರಾಕೃತ, ಪರ್ಷಿಯನ್, ಅರಾಬಿಕ್ ಭಾಷೆಗಳಿಂದ ಬಂತು; ಇಂದು ಇಂಗ್ಲಿಷ್ ಮೂಲಕ ಅಥವಾ ಯುರೋಪಿನ ಇತರ ಸಂಪರ್ಕಗಳ ಮೂಲಕ ಬಂದಿರುವುದು. ಈ ೫೦ ಕೋಟಿ ಜನರ ಜೀವನದಲ್ಲಿ ಸಾರವತ್ತಾದ ಚಿಂತನೆ, ಭಾವನೆ, ಆಕಾಂಕ್ಷೆಗಳಲ್ಲಿ ಇಂದಿನ ಸ್ಫೂರ್ತಿ ಯಾವುದು, ಇಂದು ಎಲ್ಲರಿಗೂ ಸಾಮಾನ್ಯವಾಗಿ ಯಾವುದು ಆಧುನಿಕವಾಗಿ ಭಾರತೀಯ ಎಂಬಂಥ ಸತ್ತ್ವ ಹುಟ್ಟಿ ತೋರಬೇಕಾಗಿದೆ. ನಾಡಿನ ಬಾಳ ಆಳಕ್ಕೆ ಮುಳುಗಿ ಎತ್ತಬೇಕಾದ್ದು ಅದು.

ಮಣ್ಣಿಗೆ ಅದರ ರುಚಿ, ಅದರ ವಾಸನೆ ಇದೆ; ಮಣ್ಣ ಜೀವನವಿದೆ. ಅದರಲ್ಲಿ ಹೊರಳಾಡಬಹುದು. ಮೈ, ಮನಸ್ಸು, ಆತ್ಮಗಳನ್ನು ಅದಕ್ಕೆ ಕರ್ತೃತ್ವ, ಭೋಕ್ತೃತ್ವ ಇವೆಯೆಂದು ಒಪ್ಪುವವರು –ಕೆಸರು ಮಾಡಿಕೊಳ್ಳಬಹುದು. ಕುಳಿತೋಡಿ ಅದರಲ್ಲಿ ಅನಂತ ಕಾಲಕ್ಕೂ – ಯಾವ ಪುನರುತ್ಥಾನವೂ ದೊರಕದೆ – ಹುಡಿಯಾಗಿ ಮುಗಿಯಬಹುದು. ಮಣ್ಣು ಒಂದು ರೀತಿ ನಿಜಸ್ಥಿತಿ; ಇನ್ನೊಂದು ರೀತಿ ಚರಮ ಸ್ಥಿತಿ, ಇವುಗಳಿಗಿರುವ ಅಂತರ ಮೇರುವಿನಷ್ಟು, ಧ್ರುವಗಳಷ್ಟು ದೂರ. ನಡುವೆ ಸಂಸ್ಕಾರ, ಸಂಸ್ಕೃತಿ ಎಂಬುದುಂಟು, ಬೇಕಾದವರಿಗೆ. ಹಳಿವವರಿಗಿಲ್ಲ. ಅಣಕಿಸುವವರಿಗೆ, ಅತೃಪ್ತರಿಗೆ, ಕಾಣಿಸುವ ರೀತಿಯಲ್ಲಿ ಮಾತ್ರವಲ್ಲ, ಅದನ್ನು ಸಾಧಿಸಬೇಕೆಂಬವರಿಗೆ.

ಅದರ ಚಿತ್ರಗಳನ್ನೂ ರಹಸ್ಯಗಳನ್ನೂ, ಸೊಬಗುಗಳನ್ನೂ ತೋರಿಸುವ ಕೃತಿಗಳು ಹುಟ್ಟುವುದು ಒಂದು ನಾಡಿನ, ಕಾಲದ ಪುಣ್ಯ. ಅಂಥ ಪರಿಣಾಮವನ್ನು ಹಾರೈಸೋಣ.

...ಕಾಲದ ಪುರಸ್ಕಾರ ಯಾವುದಕ್ಕೆ ಆಗುತ್ತದೆಯೊ ಆ ಬೆಲೆ, ಆ ಗುಣಗಳ ಕಡೆ ನೋಡುತ್ತಿರೋಣ. ಅದು ಮಣ್ಣಿಂದ ಬಹು ಮೇಲೆ. ಈ Negativity ತೆಗಳಿಕೆ – ಅಣಕಗಳ ಕಾಂಡ ಎಷ್ಟು ಬೇಗ ಮುಗಿದರೆ ಅಷ್ಟೂ ಮೇಲೇ.

...ಖಾಸಗಿಯಾಗಿ ಒಂದು ಮಾತನ್ನು ಹೇಳಿಕೊಳ್ಳುತ್ತೇನೆ. ನನ್ನ ಬೆಳವಣಿಗೆ ಎಂದೂ ಅಷ್ಟೇನೂ ಹೇಳಿಕೊಳ್ಳುವಂಥದಾಗಿರಲಿಲ್ಲ. ಈ ನಮ್ಮ ಮಗು ಹುಟ್ಟುವವರಿಗೆಲ್ಲ ಅಣ್ಣ, ಬೆಳೆಯುವವರಿಗೆಲ್ಲ ತಮ್ಮ ಎಂದರು ನನ್ನನ್ನು ಸಾಕಿದ ತಾಯಿಯರು. ಹುಟ್ಟಿದವರೆಲ್ಲಾ ನನ್ನ ಅಣ್ಣಂದಿರಾಗಿ ಬೆಳೆಯಲಿ ಎಂಬುದು ನನ್ನ ಹಾರೈಕೆ. ಈ ನಡುವೆ ನನ್ನದೂ ಒಂದು ಕಿರಿಜೀವ. ಇದಕ್ಕೂ ಜಗತ್‌ಸೃಷ್ಟಿಯಲ್ಲಿ ಒಂದು ಸ್ಥಾನವಿದೆ. ಅಷ್ಟಾಗಿ ಇರುವುದರಲ್ಲಿ ನಾನು ತೃಪ್ತ.

(ನೆರಳು–ಬೆಳಕು: ಮುನ್ನುಡಿ ೧೯೭೮ ದ್ವಿತೀಯ ಆವೃತ್ತಿ)

# ಕಾರಂತ

"ಈ ವ್ಯಕ್ತಿ ದೊಡ್ಡದು. ಈತ ಎಲ್ಲಿಯೋ 'ನಾನೇ ನನ್ನ ಕೃತಿ' ಎಂದಿದ್ದಾರೆ. ಇದು ನಿಜ. ದೇಶವೆಲ್ಲ ಸುತ್ತಿ ನಾನಾ ಬಗೆಯ ಜನರನ್ನು ನೋಡಿ, ಅವರೊಡನೆ ಕೂಡಿ ಆಡಿ, ಮಕ್ಕಳಿಗೋಸ್ಕರ ಹಾಡಿ ನಲಿದು, ಕಲೆಗೋಸ್ಕರ ದುಡಿದು ದಣಿದು, ತನ್ನ ಆಸಕ್ತಿಯ ಮಾರ್ಗದಲ್ಲೇ ನಡೆದು ತನ್ನ ಮನಸ್ಸಿನ ಪ್ರಪಂಚವನ್ನು ಕೃತಿಯ ಪ್ರಪಂಚವನ್ನು ಅವರು ಬೆಳಸಿಕೊಂಡಿದ್ದಾರೆ. ಅವರ ಪ್ರಾಮಾಣಿಕತೆ, ದೊಡ್ಡತನ, ಔದಾರ್ಯ, ಶುಚಿಯಾದ, ಅಪರಾಜಿತವಾದ ಮನಸ್ಸು ಸಾಧಾರಣ ದುರ್ಲಭ. ಅವರು ಸಂಪಾದಿಸಿದ್ದು ನಿಜವಾದ ವಿದ್ಯೆ: ಮನುಷ್ಯನ ವ್ಯಕ್ತಿತ್ವಕ್ಕೆ, ಬಿಡುಗಡೆಗೆ ಪೋಷಕವಾಗುವ ವಿದ್ಯೆ. 'ಸಾ ವಿದ್ಯಾ ಯಾ ವಿಮುಕ್ತಯೇ' ಎಂದಹಾಗೆ... ಬಹುಮುಖ ಕ್ರಿಯಾಸಿದ್ಧಿ ಕಾರಂತರ ಯತ್ನದ ಗುರಿ, ಪೂರ್ಣತೆ ಅವರ ಜೀವನದ ಗುರಿ. ಬಾಳು ದೊಡ್ಡದಾಗಬೇಕು. ಚೆನ್ನಾಗಬೇಕು, ಸುಂದರವಾಗಬೇಕು ಎಂಬ ಗುರಿಯನ್ನು ಸದಾ ಲಕ್ಷ್ಯದಲ್ಲಿರಿಸಿಕೊಂಡು ನಡೆದ ಹಿರಿಯ ಜೀವ ಕನ್ನಡದ ಶಿವರಾಮ ಕಾರಂತರು." ಎಂದು ವಿ.ಸೀ. ಹದಿನಾಲ್ಕು ವರ್ಷಗಳ ಕೆಳಗೆ ಒಂದು ಉಪನ್ಯಾಸದಲ್ಲಿಸಾರಿದ್ದಾರೆ. ಅದರ ಮೇಲೂ ಕಾರಂತರು ಬೆಳೆದಿದ್ದಾರೆ – ಎತ್ತರಕ್ಕೆ, ಸುತ್ತಕ್ಕೆ, ಜನಗಣಮನದ ಅಂತರಾಳಕ್ಕೆ ಬೆಳೆದು ನಿತ್ತಿದ್ದಾರೆ. ಸತ್ವಪೂರ್ಣ, ಸೃಷ್ಟಿಶೀಲ ಲೇಖಕ, ಕಲಾವಿದ ಎಷ್ಟು ದೂರ ಬೆಳೆಯಬಹುದೋ ಅಷ್ಟು ಬೆಳೆದರು. ಒಬ್ಬ ಮನುಷ್ಯ ತನ್ನ ಬದುಕಿನಲ್ಲಿ ಎಷ್ಟು ಪೂರ್ಣತೆ ಮೈಗೂಡಿಸಿಕೊಳ್ಳಬಹುದೋ ಅಷ್ಟನ್ನೂ

ಆರ್ಜಿಸಿಕೊಂಡರು – ಎಂದು ತೋರುತ್ತದೆ ಅರುವತ್ತೆಂಟರ ಈ ಭೂಮವ್ಯಕ್ತಿತ್ವವನ್ನು ಕಂಡಾಗ. ಇಂದು ಯಾವನಾದರೂ ಸಾಹಿತಿಗೆ ಈ ದೇಶದಲ್ಲಿ ಎಲ್ಲಾದರೂ ಅಂಜಿಕೆ, ಭೀತಿ ತೋರಿಸುವುದಾದಲ್ಲಿ ಅದು ಕಾರಂತರಿಗೆ ಮಾತ್ರ ಸಲುವ ಉಡುಗೊರೆ. ತ್ರಿಕರಣ ಶುದ್ಧಿಯ ಮಹನೀಯರನ್ನು ಕಂಡಾಗ ಒಡೆದ ಬಾಳುವೆ ನಡೆಸುವ ಧುರೀಣರೂ ಅಂಜಬೇಕು. ಕನ್ನಡ ಸಾಹಿತ್ಯದಲ್ಲಿ ಅನೇಕ ಯಶೋವಂತ ಸಾಹಿತಿಗಳಿದ್ದಾರೆ. ಸುಪ್ರಸಿದ್ಧರಿದ್ದಾರೆ, ಘನ ಪಂಡಿತರಿದ್ದಾರೆ, ಆದರೆ ಕಾಯೇನ ವಾಚಾ ಮನಸಾ ಬದುಕುವ ಅಖಂಡ ಜೀವನಕ್ರಮವನ್ನೂ, ನಿರಂತರ ವಾಙ್ಮಯ ತಪಸ್ಸನ್ನೂ ಆಚರಿಸಿದ ಮಹನೀಯರು ಒಬ್ಬರೇ.

ಈ ವಿಷಯದಲ್ಲಿ ಗಾಂಧೀಜಿಯ ಅನೇಕ ವೀರವ್ರತಗಳನ್ನೊಪ್ಪಲಾರದ ಕಾರಂತರಷ್ಟು ನೇರ ಗಾಂಧೀವಾದಿಗಳು ನಮ್ಮ ಸಾರ್ವಜನಿಕ ಜೀವನದಲ್ಲೇ ಕಾಣ ಸಿಗಲಾರರು. ನಡೆ ಮತ್ತು ನುಡಿಯ ಸಮನ್ವಯ ಸಾಧಿಸಲೆಳಸಿದ ಆ ಮಹಾತ್ಮನನ್ನು ಕೆಲಕಾಲ ಅನುಸರಿಸಿದ ಕಾರಂತರನ್ನು ಕರ್ನಾಟಕದ ಕಟ್ಟಕೊನೆಯ ಗಾಂಧೀವಾದಿ ಎನ್ನಬಹುದೋ ಏನೋ; ತೋರಿಕೆ, ಡಂಭಾಚಾರ, ಆಡಂಬರ, ಸೋಗು ಯಾರಲ್ಲಿ ಕಂಡರೂ ಮುನಿದೇಳುವ ಕಾರಂತರು ತಮ್ಮ ಅಭಿನಂದನೋತ್ಸವದಲ್ಲಿಯೂ ತನ್ನತನವನ್ನೇ ಮೆರೆದದ್ದುಂಟು; ಓರಗೆಯ ಸಾಹಿತಿಗಳ ಪೊಳ್ಳುತನವನ್ನು ಬಯಲಿಗೆಳೆದದ್ದುಂಟು. ಊರಿಗೆ ಉಪದೇಶ ಮಾಡುವವರ ಅಪರಿಶುದ್ಧ ಚರಿತ್ರೆಯನ್ನು ಕಥೆ ಕಾದಂಬರಿಗಳ ಮೂಲಕ ಮಾತ್ರವೆ ಅಲ್ಲದೆ ತನ್ನ ಉಪನ್ಯಾಸಗಳಲ್ಲಿಯೂ ಖಂಡಿಸಿದ್ದುಂಟು.

ಕಾರಂತರು ಕನ್ನಡದ ಕಾದಂಬರಿ ಸಾಮ್ರಾಜ್ಯದ ಸರ್ವಶಕ್ತ ಪ್ರಭುವಷ್ಟೆ. ಈ ಕಾದಂಬರಿಗಳ ಬೆಳವಣಿಗೆ ನೋಡಿದರೆ, ಮೂಲದಿಂದ ಇಂದಿನ ವರೆಗಿನ ಇತಿಹಾಸದ ರೂಪರೇಖೆಯನ್ನು ಎಳೆದರೆ,

ಲೇಖಕನ ವ್ಯಕ್ತಿತ್ವದ ಒಲವು ನಿಲವು, ಗೆಲವು ಕೂಡ ಗೋಚರಿಸುತ್ತದೆ. ಅವರ ಕಾದಂಬರಿ (ಬಾಲಿಶವಾದ 'ವಿಚಿತ್ರ ಕೂಟ' ಬಿಟ್ಟರೆ) ತೊಡಗಿದ್ದು ವಾಲ್ಮೀಕಿಯ ಹಾಗೆ, ಅಂತರಂಗಕ್ಕಾದ ನೋವಿನಿಂದಲೇ. 'ಚೋಮನದುಡಿ'ಗೆ ಹರಿಜನರ ಗುಡಿಸಲಿನ ದಾರಿದ್ರ್ಯದ ವಾಸ್ತವ ಚಿತ್ರ ಸ್ಫೂರ್ತಿಯನ್ನೊದಗಿಸಿದೆ. ಹೆಮ್ಮಿಂಗ್ವೇಯ ನೋಬೆಲ್ ಪಾರಿತೋಷಕ ಪಡೆದ 'ಮುದುಕ ಮತ್ತು ಕಡಲಿ'ನಂತೆ ಗಂಭೀರ ದುರಂತವನ್ನು ಚಿತ್ರಿಸಿದ ಈ ಕಾದಂಬರಿ ಕಾರಂತರ ಚೊಚ್ಚಲ ಕೃತಿಯೆಂದರೆ ನಂಬುವುದು ಕಷ್ಟ. ಮಾನವೀಯ ಅನುಕಂಪ, ಮತ್ತು ಕರುಣೆಗಳಿಂದ ಪ್ರೇರಿತವಾದ ಹಲವಾರು ಕಾದಂಬರಿಗಳು – ಮರಳಿ ಮಣ್ಣಿಗೆ, ಬೆಟ್ಟದ ಜೀವ, ಕುಡಿಯರ ಕೂಸು, ಸರಸಮ್ಮನ ಸಮಾಧಿ, ಮುಗಿದ ಯುದ್ಧ, ಸಮೀಕ್ಷೆ, ನಂಬಿದವರ ನಾಕ ನರಕ, ಅಳಿದ ಮೇಲೆ – ಮುಂತಾದುವು ಅವರ ಮನೋರಂಗದ ಪ್ರಗತಿಯನ್ನು, ಸಂಚಾರಗಳನ್ನು ಪ್ರತಿನಿಧಿಸುವ, ಪ್ರತಿಫಲಿಸುವ ಕಲಾತ್ಮಕ ಕೃತಿಗಳು. ಒಂದೆರಡು ಬರೆದರೂ ಚಿರಸ್ಥಾಯಿಯಾಗುವ ಅವರ ಹೆಸರು ಇಂದು ಕನ್ನಡಿಗರ ಹೃದಯದಲ್ಲಿ ಗುಡಿ ಕಟ್ಟಲು ಇಂಥ ಅಮೋಘ ಕಾದಂಬರಿಗಳೇ ಕಾರಣ. ಇತ್ತೀಚೆಗೆ ಕಾರಂತರು ಮತ್ತಷ್ಟು ಬೆಳೆದಿದ್ದಾರೆ. ಚಿಂತನಪರರಾಗಿದ್ದಾರೆ, ಬಾಳ್ವೆಯೇ ಬೆಳಕೆಂದ ಅವರ ವೀರ ಪಂಥ ಇದೀಗ ಸಿದ್ಧಿಯ ನೆಲೆ ಮುಟ್ಟಿದೆಯೇನೋ ಅನಿಸುವಂತೆ ಅವರ ಲೇಖನಿ ಒಂದು ತಿರುವಿನಲ್ಲಿ ಸಾಗಿ ಮುನ್ನುಗ್ಗಿದೆ. ವಾಸ್ತವವಾದ, ಮಾನವ್ಯವಾದ (humanism) ಇದನ್ನು ಗಾಂಧೀ ಪ್ರಭಾವಿತ ಯಾವ ಲೇಖಕನೂ ಬಿಡಲಾರ; ಆದರೆ ವೈಚಾರಿಕವಾಗಿ ಗಾಂಧಿಯಿಂದ ವಿಮೋಚನೆ ಪಡೆದ ಬಳಿಕ ಕಾರಂತರು 'ಮನುಷ್ಯ ಅನೇಕ ವಿಷಯುಗಳಲ್ಲಿ ಪ್ರಾಣಿಯಿಂದ ಭಿನ್ನವಾಗಿಲ್ಲ. ಭಿನ್ನನಾಗಲಾರ. ಹಾಗೆಲ್ಲಾದರೂ ಆದರೆ ಅದು ವಿಕಾರ, ಪರ್ವರ್ಸಿಟಿ'

ಎಂಬ ತೀರ್ಮಾನಕ್ಕೆ ಬಂದಂತೆ ತೋರುತ್ತದೆ. ಮನುಷ್ಯನ ವ್ಯಕ್ತಿತ್ವ ದಲ್ಲಿ ಮನಸ್ಸಿನ ಪಾತ್ರ ಎಷ್ಟು? ಮೈಯ ಪಾತ್ರ ಎಷ್ಟು ಎಂದು ಅವರೀಗ ವಿವೇಚನೆಗೆ ಇಳಿದಂತೆ ಕಾಣುತ್ತದೆ. 'ಸ್ವಪ್ನದ ಹೊಳೆ' ಯಲ್ಲಿ ಟಿಸಿಲೊಡೆದ ಈ ಸಮಸ್ಯೆ 'ಮೂಕಜ್ಜಿಯ ಕನಸು'ಗಳಲ್ಲಿ ಪ್ರಾಗ್ಜೀವನದ ಇತಿಹಾಸ ಪೂರ್ವ ಯುಗದಲ್ಲಿ ಬೇರುಬಿಟ್ಟು ಇತ್ತೀಚೆಗೆ ಪ್ರಕಟವಾದ 'ಮೈಮನಗಳ ಸುಳಿಯಲ್ಲಿ' ಹೂವಾಗಿ ಅರಳಿದೆ, ಹಣ್ಣಾಗಿ ಮಾಗಿದೆ. ಭಾರತೀಯ ಪರಂಪರೆಯಲ್ಲಿ ವಿರಕ್ತಿ ಮಾರ್ಗದ ಶೋಧ, ಬೋಧ ನಡೆದಷ್ಟು ಅನುರಕ್ತಿ ಮಾರ್ಗವನ್ನು ಯಾರೂ ಅನ್ವೇಷಣೆ ಮಾಡಿಲ್ಲ. ಐರೋಪ್ಯ ವಿದ್ವಾಂಸರ ಮನ ಶ್ಶಾಸ್ತ್ರದಲ್ಲಿ ಮನುಷ್ಯನ ವ್ಯಕ್ತಿತ್ವದ ಒಂದು ಮಹತ್ವಪೂರ್ಣ ಸತ್ಯ ಗೋಚರಕ್ಕೆ ಬಂದಿದೆ – ಆದ್ದರಿಂದ ಇದನ್ನು ಬಿಡತಕ್ಕದ್ದಲ್ಲ. ವೈಜ್ಞಾ ನಿಕವಾಗಿ ಈ ಎರಡು ಮಾರ್ಗಗಳ ಸಮನ್ವಯ ಸಾಧ್ಯವೆ? ಅಸಾಧ್ಯವೆ? ಭೌತಿಕವೆಂದೆನಿಸಬಹುದಾದ ಈ ತಥ್ಯ ಎಲ್ಲರ ಮನ ಸ್ಸನ್ನೂ ವ್ಯಕ್ತಿತ್ವವನ್ನೂ ರೂಪಿಸುವುದರಲ್ಲಿ ಪ್ರಾಮುಖ್ಯವಾದ ಪ್ರೇರಣೆ ಆಗಿಲ್ಲವೆ? ಹಾಗಾದರೆ ಅದರ ತಳವನ್ನು ಶೋಧಿಸ ಬೇಕು – ಇದು ಕಾರಂತರ ಕಲೆಯ ಹಠಯೋಗ. ಬಸರೂರಿನ ಸೂಳೆಯೊಬ್ಬಳ ಆತ್ಮಕಥೆಯನ್ನು ಅಳವಡಿಸಿಕೊಂಡ ಕಾರಂತರ ಮುಖ್ಯ ಕಾಳಜಿ ಇಲ್ಲಿ ಇಡಿ ಮನುಷ್ಯ ಜಾತಿಯ ಮೂಲಭೂತ ದೈಹಿಕ ಪ್ರಜ್ಞೆಯಾದರೂ, ಕರುಣಾಳು ಕಾರಂತರು ಇಲ್ಲಿಯೂ ಮರೆಯಾಗಿಲ್ಲ. ಎಮಿಲಿಜೋಲಾ 'ನಾನಾ' ಬರೆದಾಗ ಜೋಲಾ ತರುಣನಾಗಿದ್ದಿರಬೇಕು ಆದ್ದರಿಂದ ಅಲ್ಲಿ ಚೆಲ್ಲಾಟಕ್ಕೆ ವಿಲಾಸಕ್ಕೆ ಹೆಚ್ಚು ಪ್ರಾಧಾನ್ಯ. ಕಾರಂತರ ಮಂಜುಳೆ ಸಂಪ್ರದಾಯಕ್ಕೆ ಬಲಿ ಯಾದ ಸ್ತ್ರೀತ್ವದ ಪ್ರತಿನಿಧಿ. ನಾಲ್ವರು ಇನಿಯರ ನಡುವೆ ಅವಳು ಸಾಗಿಸಿದ ಮನೋಮಯ, ಮೃಣ್ಮಯ ಬದುಕು ಒಂದು ಕರುಣಾ ಕ್ರಂದನ. ಕಾರಂತರ ಹೃದಯ ಸ್ಪಂದನದನ್ನು ಗುರುತಿಸಿಕೊಡುವ

ಈ ಹಿರಿಯ ಕೃತಿಯಲ್ಲಿ ಕಾರಂತರ ಹೆಂಗರುಳು, ತಾಯ್ತನ, ಜಗತ್ತಿನ ಮಾತೃಸೂತ್ರ, ನಿಚ್ಚಳವಾಗಿ ಎದ್ದು ತೋರುತ್ತಿದೆ. 'ನಮಗೆ ಬೇಗುದಿಯಿದ್ದರೂ ಹಗಲು ರಾತ್ರಿಯೆಲ್ಲ, ದಿನದಿನವೆಲ್ಲ – ಎಂದು ತಮ್ಮ ಕೊನೆಗಾಲದಲ್ಲಿ ಮೈಮನ ತುಂಬಿದ ಬಾಳು ಹೇಗೆ ಚೆನ್ನಾಗಿ ನಿಶ್ಚಿಂತತೆಯಿಂದ ತೊಟ್ಟನ್ನು ಕಳಚಿ ಉದುರಬಲ್ಲುದು – ಎಂದು ತಿಳಿಸಿಕೊಟ್ಟರು... ಮಂಚಕ್ಕೆ ನನ್ನ ಮನಸ್ಸು ಸೀಮಿತವಾಗಿರಲಿಲ್ಲ. ಮಂಚದಿಂದ ಮೈಯನ್ನು ತುಂಬಿತ್ತು; ಮೈಯಿಂದ ಮನವನ್ನು ತುಂಬಿತ್ತು. ಆ ಮೈಮನಗಳೆರಡೂ ನನ್ನ ಬಾಳಿನ ಎಲ್ಲ ಕ್ಷಣ ಗಳನ್ನೂ ತುಂಬಿತ್ತು... ನನ್ನ ತಂಬೂರಿಯ ದಂಡ, ಬುರುಡೆ ಉಳ್ಳೂರರು. ಅದರ ತಂತಿ ಆನಂದರು. ಅವರಿಬ್ಬರೂ ನನ್ನ ಜತೆಯಲ್ಲಿ ಅನುದಿನ ಇರುವುದರಿಂದ ನಾನು ಸುಮಂಗಲೆ, ನಿತ್ಯ ಸುಮಂಗಲೆ' ಎನ್ನುವ ಮಂಜುಳೆಯ ಕಥೆ ಕಾದಂಬರಿಯೋ, ಕಾವ್ಯವೋ – ಹೇಗೂ ಕಾರಂತ ಸಾಹಿತ್ಯದ ಸಿದ್ಧಿಯ ಒಂದು ದೊಡ್ಡ ಮಜಲನ್ನು ಈ ಕಾದಂಬರಿ ಸೂಚಿಸುತ್ತದೆ.

ಕಾದಂಬರಿಯೊಂದೇ ಏನು, ನಾಟಕವಾದರೆ ನಾಟಕ, ಸಂಶೋಧನೆ ಆದರೆ ಅದು, ಕೋಶವಾದರೆ ಅದು, ವೈಚಾರಿಕ ವಿಶ್ವಕೋಶವಾದರೆ ಅದು – ಸರ್ವತ್ರ ವ್ಯಾಪನೆಯುಳ್ಳ ಕಾರಂತರ ಲೇಖನ ಶಕ್ತಿ ಅಪಾರವಾದದ್ದು. ಚಿತ್ರ, ಶಿಲ್ಪ, ಸಂಗೀತ, ಯಕ್ಷಗಾನ ನೃತ್ಯ, ಬ್ಯಾಲೆ, ಅಪೆರಾ – ಇಲ್ಲಿಯೂ ಕಾರಂತರ ಕಲಾವಿದ ದೃಷ್ಟಿಯು ಅಪೂರ್ವ ಸೃಷ್ಟಿಗೆ ಕಾರಣವಾಗಿದೆ. ಇದೀಗ ೬೮ರ ವಯಸ್ಸಿನಲ್ಲಿ ಈ ಜಿಜ್ಞಾಸು ಕರ್ನಾಟಕದ ವರ್ಣಚಿತ್ರಗಳ ಕಾಣ್ಕೆಗಾಗಿ ಊರೆಲ್ಲ ಅಲೆದಾಡುತ್ತಿದ್ದಾರೆ. ಯಕ್ಷಗಾನದ ಸಾಂಪ್ರದಾಯಿಕ ಶೈಲಿಯನ್ನುಳಿಸಲು ಇವರು ಪಟ್ಟ ಶ್ರಮ ಮತ್ತು ಅದರ ರಾಷ್ಟ್ರೀಕರಣಕ್ಕಾಗಿ ಇವರು ಮಾಡಿದ ಅಪೆರಾ ರೂಪಕಗಳು ಕಾರಂತರ ಕಲಾ ಸೃಷ್ಟಿಯ ವಿಲಕ್ಷಣ ಸಿದ್ಧಿಯ ಪ್ರತೀಕಗಳು. ಅಪ್ರತಿಮ ಧೀಶಕ್ತಿ,

ಸಾಹಿತ್ಯಸಂಪನ್ನತೆ, ಕಲಾ ಪರಿಣತಿ – ಇಷ್ಟಲ್ಲದೆ ಧ್ಯೇಯಪೂರ್ಣ ಜೀವನೋತ್ಸಾಹಗಳ ಯೋಗಸಿದ್ಧಿ ಸಾಧಕ ಕಾರಂತರ ವೈಶಿಷ್ಟ್ಯ, ಕನ್ನಡವೇ ಏಕೆ ಭಾರತೀಯ ಸಾಹಿತ್ಯಾಕಾಶದಲ್ಲಿಯೆ ಇದೊಂದು ವಿಲಕ್ಷಣ ನಕ್ಷತ್ರ. ಇದಕ್ಕೆ ಅತಿ ಹತ್ತಿರದ ಇನ್ನೊಂದು ಉದಾಹರಣೆ ಬಂಗಾಳದ ರವೀಂದ್ರನಾಥ ಠಾಕೂರ ಒಬ್ಬರೇ ಎಂದರೆ ಅತಿಶಯೋಕ್ತಿ, ಅತ್ಯಭಿಮಾನ ಎನಿಸಲಾರದಷ್ಟೆ – ಬಲ್ಲವರಿಗೆ?

### ಉಳಿಯುವ ಮಾತು

ಪಾರಲೌಕಿಕರು, ಪಾರಮಾರ್ಥಿಗಳು, ಕಾಣದಿರುವ ಪರವನ್ನು ನೋಡಲು ನಿಸರ್ಗವೆಂಬ ಕಂಡಿಯನ್ನು ಬಳಸಿದ್ದಾದರೆ, ಅವರು ಅರಸುವ ಬ್ರಹ್ಮ ಎಂಬುದಕ್ಕೆ ಅರ್ಥಸ್ಪಷ್ಟತೆ, ವಿಸ್ತಾರ, ಚೆಲುವು ಇನ್ನಷ್ಟು ಹೆಚ್ಚಾಗಿ ಬಂದೀತು. ಅಮೂರ್ತ ತತ್ವಗಳು ಮೂರ್ತವಾಗಿ ಕಾಣಿಸದಲ್ಲಿ, ಮೂರ್ತಿ ಪರಿಚಿತ ಮನಸ್ಸಿಗೆ ತಿಳಿಯುವುದೆಂತು? (ಹುಚ್ಚು ಮನಸ್ಸಿನ ಹತ್ತು ಮುಖಗಳು)

oo oo oo

ಜೀವನದ ಅಪಮೌಲ್ಯಗಳನ್ನು ಎತ್ತಿಕೊಂಡು ದುಡಿಯಬೇಡಿ.

(ಒಂದು ಉಪನ್ಯಾಸ)

# ಅ. ನ. ಕೃ.

ಅಚ್ಚ, ಕೆಚ್ಚು, ಹದಿನಾರಾಣೆ, ನೂರಕ್ಕೆ ನೂರು ಪೈಸೆ ಕನ್ನಡ ಅಭಿಮಾನಕ್ಕೆ ಉಸಿರೂದಿ, ಮೈಕೊಟ್ಟು ಭೂಮಿಗೆ ಇಳಿಸಿದರೆ ಅದು ಅ.ನ.ಕೃ. ಎಂಬ ಮನುಷ್ಯನಾಗುತ್ತದೆ. ಕನ್ನಡದ ಅಭಿಮಾನ ಇಂಗ್ಲಿಷ್ ಕಲಿತ ಜನರಲ್ಲಿ ಪೂರ್ತಿ ಅದೃಶ್ಯವಾಗಿದ್ದ ಕನ್ನಡ ನವೋದಯದ ಯುಗದಲ್ಲಿ ಅ.ನ.ಕೃ. ತರುಣರಾಗಿದ್ದರು. 'ಕಥಾಂಜಲಿ', 'ಕಾಮನ ಬಿಲ್ಲು' (ಸಂಪಾದಿತ ಕಥಾಸಂಗ್ರಹ) 'ಮಧುವನ' (ಉಡುಪಿಯಲ್ಲಿ ೧೯೩೦ರ ದಶಕದಲ್ಲಿ ಪ್ರಕಟವಾದೊಂದು ಕಥಾಸಂಗ್ರಹ)ಗಳ ಅ.ನ.ಕೃ.' ಉದಯರಾಗ' 'ಸಂಧ್ಯಾರಾಗ' ಕಾದಂಬರಿಗಳಿಂದ ಕನ್ನಡ ಕಾದಂಬರೀ ಸಾಹಿತ್ಯ ಕ್ಷೇತ್ರಕ್ಕೆ ಪ್ರವೇಶಿಸಿದ ದಿನ ಒಂದು ಮಹಾಸುದಿನ. ಅ.ನ.ಕೃ. ಪ್ರತಿಭೆಗೆ ಕಾದಂಬರಿ ಸಾಕಷ್ಟು ವಿಸ್ತಾರವಾದ, ಗಹನವಾದ, ಹರವನ್ನೊದಗಿಸಿತು. ಅವರ ಲೇಖನಶಕ್ತಿಯ ವೈಭವಕ್ಕೆ ಕಾದಂಬರಿ ಉತ್ತಮ ಮಾಧ್ಯಮವಾಯಿತು. ಅವರ ಇತರೆಲ್ಲ ಕೃಷಿಗಳನ್ನೂ ಹಿಮ್ಮೆಟ್ಟಿಸುವಂತೆ ಗುಣದಲ್ಲಿ, ಗಾತ್ರದಲ್ಲಿ ಅವರ ಕಾದಂಬರಿಯ ಬೇಸಾಯ ಮುನ್ನಡೆಯಿತು.

ಐವತ್ತು ಕಾದಂಬರಿಗಳನ್ನು ಬರೆದ ಉತ್ಸವ ನಡೆದದ್ದು ಹುಬ್ಬಳ್ಳಿಯಲ್ಲಿ – ಇದು ಧ್ವನಿಪೂರ್ಣವಾಗಿತ್ತು. ಅ.ನ.ಕೃ. ಅಷ್ಟು ಹೊತ್ತಿಗಾಗಲೇ ಅಖಿಲ ಕರ್ನಾಟಕ ರಸಿಕರ ಮನಸ್ಸನ್ನು ಸೂರೆಗೊಂಡಿದ್ದರು. ಅಂದಿನ ಅವರ ಉಪನ್ಯಾಸದಲ್ಲಿ ಅವರು ತಮ್ಮ ಕೃತಿರಚನೆಯು, ರಸಾಸ್ವಾದನೆಯು, ಸಹೃದಯರ ಒಟ್ಟು ಅಂತರಾರ್ಥವನ್ನೇ

ವಿವರಿಸಿದರು. ಒಂದು ಮರದಲ್ಲಿ ನೂರು ಹಣ್ಣಾಗಬೇಕಾದರೆ, ಅದೆಷ್ಟೋ ಸಾವಿರ ಹೂ ಅರಳಬೇಕು ಎಂದರು. ಸ್ವ-ಕೃತಿ ವಿಮರ್ಶೆಯನ್ನು ಇಷ್ಟು ನಿಷ್ಠುರವಾಗಿ ಮಾಡಿಕೊಂಡ ಲೇಖಕವರೇಣ್ಯರು ನಮ್ಮಲ್ಲಿ ವಿರಳ. ಇಂಥ ಎದೆಗಟ್ಟಿತನ, ಸಾಚಾತನ ಅ.ನ.ಕೃ.ಗೆ ದೊರೆತ ಒಂದು ವರ. ನೂರಾರು ಕೃತಿಸಂಖ್ಯೆಯುಳ್ಳ ಒಬ್ಬ ಲೇಖಕ ತನ್ನ ತಾ ಹೊಗಳಿಕೊಳ್ಳದೆ ವಿಮರ್ಶೆಯ ಒರೆಗೆ ತನ್ನನ್ನೇ ತಾ ಹಚ್ಚಿಕೊಂಡ ಧೀರೋದಾತ್ತತೆ ಅ.ನ.ಕೃ.ಗೆ ಮಾತ್ರ ಸಾಧ್ಯವಾದದ್ದು.

೧೯೬೦ನೆಯ ಇಸವಿಯಲ್ಲಿ ಮಣಿಪಾಲದಲ್ಲಿ ನಡೆದ ೪೨ನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಅ.ನ.ಕೃ. ಆಯ್ಕೆಗೊಂಡಾಗ ಇಡಿ ಕರ್ನಾಟಕವೇ ಆನಂದೋತ್ಸಾಹದಿಂದ ಮಣಿಪಾಲದಲ್ಲಿ ಬಂದು ಸೇರಿತು. ಅಂತೂ ಅ.ನ.ಕೃ. ಕನ್ನಡಿಗರಿಗೆ ಎಷ್ಟು ಪ್ರಿಯರು, ಕನ್ನಡಿಗರು ಅವರಿಗೆಷ್ಟು ಪ್ರಿಯರು ಎಂಬುದು ಈ ಸಮ್ಮೇಳನದಲ್ಲಿ ವ್ಯಕ್ತವಾಯಿತು. ಶಿಸ್ತಿನ ಸೈನಿಕನಂತೆ ಎಲ್ಲಾ ಕಾರ್ಯಕ್ರಮಗಳಿಗೂ ಹಾಜರಿದ್ದು, ಎಂತೆಂಥ ವಾದ ವಿವಾದಗಳನ್ನು, ಚರ್ಚಾ ಪ್ರತಿ ಚರ್ಚೆಗಳನ್ನು ಮುತ್ಸದ್ದಿತನದಿಂದ ಗೆದ್ದು, ಸವ್ಯಸಾಚಿತನವನ್ನು ಮೆರೆದ ಅ.ನ.ಕೃ. ಕನ್ನಡಿಗರ ಅಭಿಮಾನಕ್ಕೂ, ಸ್ವಾಭಿಮಾನದ ಉನ್ನತಿಕೆಗೂ ಕಾರಣರಾದರು. ಪರಿಷತ್ತನ್ನು ತಪ್ಪು ದಾರಿ ಹಿಡಿಸಿದ ರಾಜಕೀಯಸ್ಥ ಮುಖಂಡರನ್ನು ಕಟುವಾಗಿ ಟೀಕಿಸಿದರೂ ಅವರ ಮನುಷ್ಯತ್ವಕ್ಕೆ ಗೌರವ ಸೂಚಿಸಿ ಅ.ನ.ಕೃ. ಅಂದಿನ ಪುರುಷಸಿಂಹ ನೆನಿಸಿದರು.

ವಾದ, ಚರ್ಚೆ ಎಂದರೆ ಅ.ನ.ಕೃ.ಗೆ ಮೀನಿಗೆ ಈಸಾಡಲು ನೀರಿದ್ದಂತೆ. ಹೌದು, ಅ.ನ.ಕೃ. ಕನ್ನಡದಲ್ಲಿ ಹತ್ತು ವರ್ಷಗಳಿಗೊಮ್ಮೆ ಏನಾದರೂ ಒಂದು ಹೊಸ ಚರ್ಚೆಗೆ ಕೇಂದ್ರವಾಗುತ್ತಾರೆ. ಪ್ರಗತಿಶೀಲರ ಚಳವಳಿಗೂ ಇವರು ಮುಖಂಡರಾದರು. ಕನ್ನಡದ ಗಡಿ

ಚಳವಳಿಗೂ ಇವರೇ ಮುಖಂಡರು, ರಾಜಧಾನಿಯ ಕನ್ನಡತನದ ಉಳಿವಿಕೆಯ ಪ್ರಯತ್ನದಲ್ಲಿಯೂ ಅ.ನ.ಕೃ. ನಾಯಕರು. ದಿ। ರಾಮಮೂರ್ತಿ, ಶ್ರೀ ವಾಟಾಳ ನಾಗರಾಜರಂಥ ಗುಲ್ಲಿನ ರಾಜಕೀಯ ಮಂದಿಗೂ ಅ.ನ.ಕೃ. ಆವರಿಂದ ಒಳ್ಳೆಯ ಮಾತುಂಟು, ಸ್ನೇಹಹಸ್ತವುಂಟು. ಚಿಕ್ಕಪೇಟೆ, ಬಳೇಪೇಟೆಗಳಲ್ಲಿಯೂ ಕನ್ನಡದ ಉಳಿವಿಗಾಗಿ ಹೋರಾಡಬೇಕಾಗಿ ಬಂದಿರುವ ಅರ್ವಾಚೀನ ಕರ್ನಾಟಕದ ರಾಜಕೀಯ ಸನ್ನಿವೇಶದಲ್ಲಿ ಅ.ನ.ಕೃ ಎಂಥವರೊಡನೆಯೂ ಹೆಗಲಿಗೆ ಹೆಗಲು ಕೊಟ್ಟು ದುಡಿದಾರು. ಅವರ ಲೇಖನಿಯ ಗಂಡುಗೊಡಲಿ ಕನ್ನಡಿಗರ ಭದ್ರತೆಗೆ ಸದಾ ಕಾವಲಿರುತ್ತದೆ.

ಅದೆಷ್ಟು ಸ್ಥಳಗಳಲ್ಲಿ ಎಷ್ಟು ಸಾರಿ, ಕನ್ನಡಿಗರಿಗೆ ಅ.ನ.ಕೃ. ತಮ್ಮ ಸರಸ, ಉತ್ಸಾಹಪೂರ್ಣ ವಾಗ್ಮಿತೆಯ ಪರಿಚಯ ಮಾಡಿಸಿದ್ದಾರೋ ಲೆಕ್ಕವಿರದು. ಸಾಗರದಲ್ಲೊಮ್ಮೆ ನಾಲ್ಕು ತಾಸು ಭಾಷಣ ಮಾಡಿದರಂತೆ—ಮಲೆನಾಡಿನ ಮಳೆಯಂತೆ. ಅ.ನ.ಕೃ ಆಡಲು ನಿಂತರೆ ಜನ ತಮ್ಮ ಮೈಯೆಲ್ಲ ಕಿವಿಯಾಗಿ ಆಲಿಸುತ್ತಾರೆ. ಅವರ ಕನ್ನಡತನ, ಸಾರಸ್ವತಶಕ್ತಿ, ಅಭಿಮಾನ, ಪೌರುಷ, ಮತ್ತು ಐತಿಹಾಸಿಕ ಪ್ರಜ್ಞೆ ಮೇಳವಿಸಿ ಅವರ ನಾಲಿಗೆಯಲ್ಲಿ ಕುಣಿದಾಗ ಅಪೂರ್ವ ರಸವೃಷ್ಟಿಯಾಗುತ್ತದೆ. ನವೋದಯದ ಪರಿವ್ರಾಜಕ ಸಾಹಿತಿಗಳಲ್ಲಿ ಅಗ್ರಗಣ್ಯರಾದ ಅ. ನ. ಕೃ ನೋಡದ, ಸಂಚರಿಸದ ಕರ್ನಾಟಕದ ಹಳ್ಳಿ, ಪಟ್ಟಣ ಇರಲಾರದು. ಈ ಸಂಚಾರದಿಂದಲೇ ಅವರ ವ್ಯಕ್ತಿತ್ವ ಔದಾರ್ಯ, ಅಖಿಲ ಕರ್ನಾಟಕೀಯ ಸೌಂದರ್ಯ ಮೂಡಿದೆ ಎಂದು ನನ್ನ ಭಾವನೆ.

ಕನ್ನಡದ ಅಭಿಮಾನಿಗಳೆಲ್ಲರೂ ಒಂದೆ ಜಾತಿ, ಒಂದೆ ಕುಲ ಎಂದು ಅರಿತು ಆಚರಿಸಿದವರಲ್ಲಿಯೂ ಅ.ನ.ಕೃಗೆ ಆದ್ಯ ಸ್ಥಾನ ದೊರೆಯುತ್ತದೆ. ಯಾವುದೇ ಜಾತಿಯಲ್ಲಿ ಹುಟ್ಟಿದ ಒಬ್ಬ ವಿರಾಟ ಪುರುಷನಿಗೆ ಇವರು ಅಡ್ಡವಾದರೆಂದು ಅ.ನ.ಕೃ ಸೊಪ್ಪು ಹಾಕಿ

ದವರಲ್ಲ. ತನ್ನ ಅಭಿಪ್ರಾಯ ಮಂಡನೆಯಲ್ಲಿ ಯಾವ ಮಹಾತ್ಮ ಇದಿರು ಬಂದರೂ ಅವನಿಗೆ ಸಡ್ಡು ಹೊಡೆದವರಲ್ಲ. ಈ ಪೌರುಷ ಈ ವೀರ ಪಂಥ ಕನ್ನಡದ ಗಡಿನಾಡಿನವರಿಗೆ ಮಾತ್ರವಲ್ಲ ಇಡಿ ನಾಡಿನವರಿಗೇ ಶ್ರೇಯಃಕಾರಕ.

ಸೌಜನ್ಯ ಮೂರ್ತಿ ಅ.ನ.ಕೃ. ಸ್ನೇಹಿತರೆಂದರೆ ಮರುಗುತ್ತಾರೆ, ಕರಗುತ್ತಾರೆ. ಕನ್ನಡದ ಹಿರಿಯ ಸಾಹಿತಿಗಳಿಗೆ ಬೆನ್ನು ತಟ್ಟಿ ಎಷ್ಟೋ ಕಿರಿಯರನ್ನು ಸಾಹಿತ್ಯ ವ್ಯವಸಾಯಕ್ಕಿಳಿಸಿದ್ದಾರೆ. ಅವರ ಉತ್ಕರ್ಷಕ್ಕೆ ಮತ್ಸರಿಸದೆ ವಾಚಾ ಮನಸಾ ಆನಂದಿಸಿದ್ದಾರೆ. ಒಂದು ತಲೆಮಾರಿನಷ್ಟು ದೀರ್ಘ ಕಾಲ ಕನ್ನಡಿಗರ ಸಂತೋಷ ಉತ್ಸಾಹ, ಉಲ್ಲಾಸಗಳಿಗೆ ಕಾರಣೀಭೂತರಾದ ಈ ಸಾಹಿತ್ಯಜ್ಞರ ಆರೋಗ್ಯ ಇಷ್ಟು ಬೇಗನೆ ಕೆಡಬೇಕಾಗಿತ್ತೆ ಎಂದು ಅವರನ್ನು ನೋಡಿದವರಿಗೆ ದುಃಖ. ಅದಾಗಿಯೂ ಅ.ನ.ಕೃ. ಸಂತೋಷಿ. ಮಾತಿನಲ್ಲಿ ಕನ್ನಡದ ಮುಂದಿನ ಕೆಲಸದ ಯೋಜನೆ, ಯೋಚನೆ. ಕನ್ನಡ ಹಿತ ಸಂರಕ್ಷಣೆಯ ಪ್ರಶ್ನೆ ಬಂದಾಗ ಈಗಲೂ ಅವರು ವೀರ ಯೋಧರೆ. ಅವರ ನಾಲಗೆ, ಲೇಖನಿ, ಎಂದೆಂದೂ ಕನ್ನಡ ಭುವನೇಶ್ವರಿಯ ಸೇವೆಗೆ ಅರ್ಪಿತ.

---

## ಉಳಿಯುವ ಮಾತು

ಯಾವ ನಾಡಿನಲ್ಲಿ ಅದರ ಸಾಹಿತಿಗಳು, ಕಲಾವಿದರಿಗೆ ಪ್ರೋತ್ಸಾಹವಿಲ್ಲವೋ ಅದು ಸಹರಾ ಮರುಭೂಮಿಗಿಂತ ಬರಡು.

oo oo

ಕನ್ನಡ ಸಾಹಿತ್ಯದ ಕಹಳೆ ಕಡಲಾಚೆ ಹೋಗಬೇಕು, ಪ್ರಯತ್ನದಿಂದಲ್ಲ– ಪ್ರತಿಭೆಯಿಂದ.

oo oo oo

ಕನ್ನಡ ಸಂಸ್ಕೃತಿ ಭಾರತದ ಸಂಸ್ಕೃತಿಯಿಂದ ಬೇರೆಯಲ್ಲ. ಆ ಮಹಾ ತಾಯಿಯ ಪುಣ್ಯ ಪುತ್ರಿ ಕನ್ನಡ ತಾಯಿ. ಕನ್ನಡ ನಾಡಿನ ಪ್ರಾಚೀನ ವೈಭವವನ್ನು ಮುಂದುವರಿಸಬೇಕಾದುದು ಕನ್ನಡ ನಾಡಿನ ಹಿತದೃಷ್ಟಿಯಿಂದ ಮಾತ್ರವಲ್ಲ–ಇಡೀ ಜಗತ್ತಿನ ಹಿತ ದೃಷ್ಟಿಯಿಂದ ಆವಶ್ಯಕ.

---

# ನವೋದಯ ಪ್ರಚಾರ ಪುಸ್ತಕಮಾಲೆ

## ಅಚ್ಚಾದುವು

ಕಲಾವಿದ ಕೃಷ್ಣ ಹೆಬ್ಬಾರರು
ಬೇಂದ್ರೆ
ಕಾರ್ಲ್‌ಮಾರ್ಕ್ಸ್
ಶಿವರಾಮ ಕಾರಂತ
ಪು. ತಿ. ನರಸಿಂಹಾಚಾರ್ಯ
ಟಿ. ಎಸ್. ಈಲಿಯಟ್
ಮಾಸ್ತಿ ವೆಂಕಟೇಶ ಐಯಂಗಾರ್
ಕಡೆಂಗೋಡ್ಲು ಶಂಕರ ಭಟ್ಟ
ಶ್ರೀರಂಗ
ಅ. ನ. ಕೃಷ್ಣರಾಯರು
ಬದುಕುವ ದಾರಿ
ಶ್ರೀಕೃಷ್ಣ ದೌತ್ಯ
ಪುರಂದರದಾಸರು
ಸೇಡಿಯಾಪು ಕೃಷ್ಣಭಟ್ಟ
ಮುದ್ದಣ
ಗೋವಿಂದ ಪೈಗಳ ಕಾವ್ಯ
ವಿ.ಸೀ.
ಉಗ್ರಾಣ ಮಂಗೇಶರಾವ್
ಹುರುಳಿ ಭೀಮರಾಯರು

## ಅಚ್ಚಿನಲ್ಲಿ

ಮುಳಿಯ ತಿಮ್ಮಪ್ಪಯ್ಯ
ಎಸ್. ವೆಂಕಟರಾಜ
ಪಂಜೆ ಮಂಗೇಶರಾಯರು
ಕಯ್ಯಾರ ಕಿಞ್ಞಣ್ಣ ರೈ